# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ — ೧೯

ಸಂಪುಟ ೧ ಸಂಚಿಕೆ ೩೧ ಕೊಪ್ಪ ೨೭-೩-೮೩ ಭಾನುವಾರ ಬೆಲೆ ೪೦ ಪೈಸೆ


## ಕೆ.ವಿ.ಮಂಜುನಾಥ ಶೆಟ್ಟಿ: ಜನತಾ ಪಕ್ಷದ ಕೊಪ್ಪ ನಗರ ಸಮಿತಿ ಅಧ್ಯಕ್ಷ

ಕೊಪ್ಪ: ಮಾ. ೨೦ರಂದು ನಡೆದ ಪಕ್ಷದ ಸಭೆಯಲ್ಲಿ ನಗರ ಸಮಿತಿಗೆ ಕೆ.ವಿ.ಮಂಜುನಾಥ ಶೆಟ್ಟಿ ಅಧ್ಯಕ್ಷರಾಗಿ ಹಾಗೂ ಹೆಚ್.ಎಸ್. ಜಯಪ್ರಕಾಶ್ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದು ಉಳಿದ ಪದಾಧಿಕಾರಿಗಳನ್ನೂ ಸದಸ್ಯರನ್ನೂ ನೇಮಿಸುವ ಅಧಿಕಾರವನ್ನು ಇವರಿಬ್ಬರಿಗೆ ವಹಿಸಲಾಗಿದೆ.

## ಲಯನ್ಸ್ ಜಿಲ್ಲಾ ಗೌರ್ನರ್ ಆಗಿ ಎಂ. ಡಿ. ಬಾಲಕೃಷ್ಣ

ಕೊಪ್ಪ: ಲಯನ್ಸ್ ಕ್ಲಬ್ಬಿನ ೩೧೮-ಡಿ-೪ ಜಿಲ್ಲೆಯ ಗೌರ್ನರ್ ಆಗಿ ಎಂ. ಡಿ. ಬಾಲಕೃಷ್ಣ ಈಚೆಗೆ ಆಯ್ಕೆಯಾಗಿದ್ದಾರೆ.

# ಅಡಿಕೆ ಧಾರಣೆ ಕುಸಿತ: ರೈತರ ಕಂಗಾಲು

**• ಈ ವರ್ಷ ಪುನಃ ಅಡಿಕೆ ಧಾರಣೆ ತೀವ್ರವಾಗಿ ಕುಸಿದಿದೆ. ಮಲೆನಾಡಿನ ಹಳ್ಳಿಗಳಲ್ಲಿ ಹತಾಶೆಯ ಹೊಗೆ ದಟ್ಟವಾಗಿ ಕವಿದಿದೆ. "ಇವತ್ತಿನವರೆಗೆ ಹ್ಯಾಗೋ ಆತು. ನಾಳೆ ಹ್ಯಾಗೋ ಯಂತೋ?" ಎಂಬ ಅನಿಶ್ಚಿತತೆಯ ಆತಂಕ ಎಲ್ಲ ಕಡೆ ವ್ಯಾಪಕವಾಗಿದೆ.**

ಕಳೆದೆರಡು ವರ್ಷಗಳಲ್ಲಿ ಕ್ವಿಂಟಾಲಿಗೆ ರೂ. ೨,೪೦೦-೨,೫೦೦ರಲ್ಲಿ ತಕ್ಕಮಟ್ಟಿಗೆ ಸ್ಥಿರವಾಗಿದ್ದ ಬೆಲೆ ಈ ವರ್ಷ ೨,೦೦೦ ರೂ.ಗೆ ಮುಟ್ಟುವುದು ಕಷ್ಟವಾಗಿದೆ. ಅಂದರೆ ಧಾರಣೆ ಶೇ. ೨೦ರಿಂದ ೨೫ರಷ್ಟು ಕುಸಿದಿದೆ.

ದಿನಸಿ, ಬಟ್ಟೆ, ಹತಾರೆಗಳು, ರಸಗೊಬ್ಬರ, ತೋಟ-ಗದ್ದೆಯ 'ಔಷಧಿ'ಗಳು, ವಿದ್ಯಾಭ್ಯಾಸದ ಮತ್ತು ಔಷಧೋಪಚಾರದ ಖರ್ಚು, ಮನೆ ಕಟ್ಟುವ ಸಾಮಗ್ರಿ-ಹೀಗೆ ಪ್ರತಿಯೊಂದು ಬಾಬಿಗೂ ದುಡ್ಡು ಚೆಲ್ಲಬೇಕಾದ ಇಲ್ಲಿನ ರೈತರಿಗೆ ಆದಾಯದ ಪ್ರಮುಖ ಮೂಲ ಅಡಿಕೆಯೇ. ಆದರೆ ಅಡಿಕೆಯೊಂದನ್ನುಳಿದು ಬೇರೆಲ್ಲದರ ಧಾರಣೆವಾಸಿಯೂ ಒಂದೇ ಸಮನೆ ಏರಿದೆ, ಇನ್ನೂ ಏರುತ್ತಲೇ ಇದೆ.

ಈಚಿನ ಎರಡು ಮೂರು ವರ್ಷಗಳಲ್ಲಿ ಅಡಿಕೆಗೆ ಸಾಕಷ್ಟು ಉತ್ತಮ ಧಾರಣೆ ಸಿಕ್ಕಿತ್ತು. ವರ್ಷಾನುಗಟ್ಟಲೆಯ ಅನಿಶ್ಚಿತ, ಆತಂಕದ ಜೀವನದಿಂದ ಸ್ವಲ್ಪ ಚೇತರಿಸಿಕೊಳ್ಳುವ ಆಸೆ ಚಿಗುರಿತ್ತು. ಆದರೆ ಅಷ್ಟರಲ್ಲೇ ಅದಕ್ಕೆ ಕೊಡಲಿಯೇಟು ಬಿದ್ದಿದೆ,

### ಫಸಲು ಹೆಚ್ಚಿದ್ದು ಕಾರಣವೆ?

ಈ ವರ್ಷ ಅಡಿಕೆ ಫಸಲು ಜಾಸ್ತಿ. ಜೊತೆಗೆ ಹಣಕಾಸಿನ ಪರಿಸ್ಥಿತಿ ಬಹಳ ಬಿಗುವಾಗಿದೆ. ಸ್ಥಾಲದ್ದಕ್ಕೆ ಮದ್ರಾಸ್, ಮುಂಬಯಿ ಮುಂತಾದೆಡೆಗಳಿಗೆ ಲಾರಿ ಸಾಗಾಣಿಕೆ ಕುಂಠಿತಗೊಂಡು, ಹೊರದೇಶಗಳಿಗೆ ರಫ್ತು ಸರಿಯಾಗಿ ಆಗುತ್ತಿಲ್ಲ. ಇದು ಈ ವರ್ಷ ಧಾರಣೆ ಏಕ್‌ದಂ ಕುಸಿಯಲು ಕಾರಣ ಎಂದು ಹೇಳಲಾಗುತ್ತಿದೆ. ಇದು ಈ ವರ್ಷದ ಮಟ್ಟಿಗೆ ಸ್ವಲ್ಪ ನಿಜವಿರಬಹುದು: ಆದರೆ ಕಾರಣ ಅಷ್ಟೇ ಇರಬಹುದೆ?

ಕಳೆದ ಹದಿನೈದಿಪ್ಪತ್ತು ವರ್ಷಗಳಿಂದಲೂ ಅಡಿಕೆ ಧಾರಣೆ ಹೀನ ಸ್ಥಿತಿಯಲ್ಲೇ ಇತ್ತು. ಮದ್ರಾಸು, ಮುಂಬಯಿ, ಕಲ್ಕತ್ತೆಗಳಂಥ ಅತಿ ದೊಡ್ಡ ಅಡಿಕೆ ಮಾರುಕಟ್ಟೆಗಳೂ ಸೇರಿದಂತೆ ದೇಶದ ಹತ್ತಾರು ವ್ಯಾಪಾರ ಕೇಂದ್ರಗಳಲ್ಲಿನ ವಹಿವಾಟೆಲ್ಲ ಕೆಲವೇ ಮಂದಿ ಕೋಟ್ಯಾಧೀಶರ ಬಿಗಿಮುಷ್ಟಿಯಲ್ಲಿರುವುದು ಒಂದು ಕಡೆಯಾದರೆ, ದೇಶದೊಳಗಾಗಲಿ, ವಿದೇಶಗಳಲ್ಲಾಗಲಿ, ಅಡಿಕೆಗೆ ಬೇಡಿಕೆ ಹೆಚ್ಚಿಸುವ ಪ್ರಯತ್ನ ನಡೆದಿಲ್ಲ. ಜೊತೆಗೆ ಇದ್ದ ಅಲ್ಪ ಸ್ವಲ್ಪ ವಿದೇಶಿ ಮಾರುಕಟ್ಟೆಯೂ ಸಹ ಆಗ್ನೇಯ ಏಷ್ಯದ ದೇಶಗಳು, ಪಾಕಿಸ್ತಾನ, ಬ್ರೆಜಿಲ್ ಮುಂತಾದ ದೇಶಗಳಲ್ಲಿನ ಅಡಿಕೆ ಬೆಳೆಯಿಂದಾಗಿ ನಮ್ಮ ಕೈತಪ್ಪಿ ಹೋಗುತ್ತಿದೆ.

ಸ್ಥಳೀಯ ಮಾರುಕಟ್ಟೆ ಪದ್ಧತಿಯೂ ರೈತರಿಗೆ ಅನುಕೂಲಕರವಾಗಿಲ್ಲ. ದಲ್ಲಾಳಿ ಮಂಡಿ, ರವಾನೆ ಮಂಡಿ ಎರಡೂ ಒಬ್ಬರದೇ ಆಗಿರುವ ಪದ್ಧತಿ ಈಚೆಗೆ ಹೆಚ್ಚಿದ್ದು, ರೈತರ ದೌರ್ಬಲ್ಯ ಅರಿತ ಈ ಸ್ಥಳೀಯ ವ್ಯಾಪಾರಿಗಳು ಅಡಿಕೆ ಧಾರಣೆಯನ್ನು ಬಹಳಷ್ಟು ಮಟ್ಟಿಗೆ ನಿಯಂತ್ರಿಸುವಲ್ಲಿ ಸಫಲರಾಗಿದ್ದಾರೆಂದು ಹೇಳಲಾಗುತ್ತಿದೆ. **ಈ ಪರಿಸ್ಥಿತಿಯಲ್ಲಿ ರೈತರ ಸಹಕಾರಿ ಸಂಸ್ಥೆ ಮ್ಯಾಮ್ಕೋಸ್ ಸಹ ರೈತರನ್ನು ಈ ಖಾಸಗಿಯವರ ಹಿಡಿತದಿಂದ ಬಿಡಿಸುವಲ್ಲಿ ಸಾಕಷ್ಟು ಪರಿಣಾಮಕಾರಿಯಾಗಿಲ್ಲ.**

### ಕ್ಯಾಂಪ್ಕೊ

೧೯೭೧-೭೨ರ ಹೊತ್ತಿಗೆ ಧಾರಣೆ ಸ್ಥಿತಿ ತೀರ ಹದಗೆಟ್ಟಾಗ ವ್ಯವಹಾರ ಜ್ಞಾನಿಗಳಾದ ಹಲವಾರು ಬೆಳೆಗಾರರ ಸತತ ಪ್ರಯತ್ನದಿಂದಾಗಿ "ಕೇಂದ್ರ ಅಡಿಕೆ ಸಂಸ್ಕರಣ ಮತ್ತು ಮಾರಾಟದ ಸಹಕಾರ ಸಂಸ್ಥೆ" (ಕ್ಯಾಂಪ್ಕೊ) ೧೯೭೩ರಲ್ಲಿ ಹುಟ್ಟಿತು. ಸರ್ಕಾರದ ನೆರವಿನೊಂದಿಗೆ ಸಹಕಾರ ರಂಗದಲ್ಲಿ ಬೆಳೆಗಾರರಿಂದ ನೇರವಾಗಿ ಅಡಿಕೆ ಕೊಂಡು, ಗ್ರಾಹಕನಿಗೆ ಆದಷ್ಟು ಹತ್ತಿರದವರೆಗೆ ತಲುಪುವ ಮೂಲಕ ಮಧ್ಯವರ್ತಿಗಳನ್ನು ನಿವಾರಿಸುವುದು ಸಂಸ್ಥೆಯ ಮುಖ್ಯ ಗುರಿಯಾಗಿತ್ತು. ಅದರಂತೆ ಅಡಿಕೆ ಕೊಳ್ಳುವ ದಿಕ್ಕಿನಲ್ಲಿ ಸಂಸ್ಥೆ ತೆಗೆದುಕೊಂಡ ಕ್ರಮಗಳಿಂದ ತಕ್ಷಣದಿಂದಲೇ ಧಾರಣೆ ಸುಧಾರಿಸತೊಡಗಿ ಹೊಸ್ತಿಲವರೆಗೂ ಹೆಚ್ಚು ಹಿಂಜರಿತ ಅನುಭವಿಸಲಿಲ್ಲ. ಈ ಸಲದ ಫಸಲಿನ ಅವಧಿಯಲ್ಲಿ ೧೫ ಕೋಟಿ ರೂ. ಸಾಲ ಎತ್ತಲು ರಿಸರ್ವ್ ಬ್ಯಾಂಕಿನ ಅನುಮತಿ ಸಿಕ್ಕಿದ್ದು, ಬೆಲೆ ಇನ್ನೂ ಕುಸಿಯುವುದಿಲ್ಲ ಎಂಬ ನಿಶ್ಚಿತ ಭರವಸೆಯನ್ನು ಕ್ಯಾಂಪ್ಕೋದ ಅಧ್ಯಕ್ಷ ವಾರಣಾಸಿ ಸುಬ್ರಾಯ ಭಟ್ಟರು ಕಳೆದ ಏಪ್ರಿಲ್‌ನಲ್ಲಿ ಕೊಪ್ಪದಲ್ಲಿ ಅಡಿಕೆ ಬೆಳೆಗಾರರ ಸಭೆಯಲ್ಲಿ ಕೊಟ್ಟಿದ್ದರು. ('ದೀವಟಿಗೆ', ೫-೪-೮೨)

### ಕ್ಯಾಂಪ್ಕೊ ದಿಕ್ಕು ತಪ್ಪಿದೆಯೆ?

ಆದರೆ ಕ್ಯಾಂಪ್ಕೋದ ಉದ್ದೇಶ ಪೂರ್ತಿ ನೆರವೇರಿಲ್ಲ. ಈ ವರೆಗೆ ಮದ್ರಾಸಿನಲ್ಲಿ ಮಾತ್ರ ಒಂದು ಡಿಪೊ ತೆರೆದಿದ್ದು ಗ್ರಾಹಕರ ಪ್ರದೇಶಗಳಲ್ಲಿ ಚಿಲ್ಲರೆ ಮಾರಾಟದ ಮಳಿಗೆಗಳನ್ನು ತೆರೆಯುವ ಅದರ ಪ್ರಯತ್ನ ಯಶಸ್ವಿಯಾಗಿಲ್ಲ. ಜೊತೆಗೆ ಈಗ್ಗೆ ೩ ವರ್ಷದ ಹಿಂದೆ ಆಧಾರ ಬೆಲೆಯಲ್ಲಿ ಕೊಂಡ ೧ ಕೋಟಿ ರೂ. ಗೋಟಡಿಕೆ ಗಿರಾಕಿಯಿಲ್ಲದೆ ಹಾಳಾಗಿ ಪೂರ್ತಿ (ಶೇ. ೯೦ ಭಾಗದವರೆಗೂ) ನಷ್ಟವಾಗಿದೆಯೆಂದು ಹೇಳಲಾಗಿದೆ.

ಇದರ ಜೊತೆಗೆ, "ಅಡಿಕೆ ಬೆಳೆ ಅಕಸ್ಮಾತ್ ಪೂರ್ತಿ ಕೈಕೊಟ್ಟಲ್ಲಿ ಬೆಳೆಗಾರರ ಹಿತರಕ್ಷಣೆಗಾಗಿ" ಕೊಕೊ ಬೆಳೆಯಲು ಪ್ರೋತ್ಸಾಹಿಸಿದ ಸಂಸ್ಥೆ ೧೯೮೦ರಿಂದ ಅದರ ಮಾರುಕಟ್ಟೆ ಬಂದ್ ಆದಾಗಿನಿಂದ (ಕೋಟ್ಯಾಧೀಶ ಕ್ಯಾಡ್ ಬರೀಸ್ ಬಹುರಾಷ್ಟ್ರೀಯ ಸಂಸ್ಥೆ ಕೊಳ್ಳುವುದನ್ನು ನಿಲ್ಲಿಸಿದ್ದರಿಂದ). ಈವರೆಗೆ ಕೊಂಡ ಕೋಕೋ ಕೋಟಿಗಟ್ಟಲೆ ರೂ. ನಷ್ಟವಾಗಿದ್ದು, ಅದನ್ನು ಉಪಯೋಗಪಡಿಸಲು ಚಾಕಲೇಟ್ ಕಾರ್ಖಾನೆಗೆ ಕೈಹಾಕಿದೆ. ಇದರಿಂದಾಗಿ ಸಂಸ್ಥೆಯ ಗಮನ ಪೂರ್ತಿಯಾಗಿ ಅಡಿಕೆಯಿಂದ ವಿಮುಖವಾಗಿ ಕೋಕೋದಲ್ಲಿ ನೆಟ್ಟಿದ್ದು, ಅಡಿಕೆ ಧಾರಣೆ ಸುಧಾರಿಸುವಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಲಾರದಂತಾಗಿದೆ ಎಂದು ಹೇಳಲಾಗುತ್ತಿದೆ.

ತೀರ್ಥಹಳ್ಳಿ, ಕೊಪ್ಪ, ಶೃಂಗೇರಿ ಭಾಗಗಳ ಬೆಳೆಗಾರರು ಸಂಸ್ಥೆಯ ಗಮನವನ್ನು ಈ ಕಡೆ ಸೆಳೆಯಲು ತೀವ್ರವಾಗಿ ಪ್ರಯತ್ನಿಸುತ್ತಿದ್ದಾರಾದರೂ ಅದಿನ್ನೂ ಸಫಲವಾಗಿಲ್ಲ. ಸಂಸ್ಥೆಯಲ್ಲಿ ಈ ಭಾಗದ (ದೇಶಾವರ ಅಡಿಕೆಯ) ಬೆಳೆಗಾರರಿಗೆ ಪ್ರತ್ಯೇಕ ಪ್ರಾತಿನಿಧ್ಯ ದೊರಕಿಸುವಂತೆಯೂ ಅವರುಗಳು ಒತ್ತಾಯಿಸುತ್ತಿದ್ದಾರೆ. **ಆದರೆ, ಹೆಚ್ಚಿನ ಬೆಳೆಗಾರರು ಇಂಥ ವಿಷಯಗಳಲ್ಲಿ ಏನೂ "ತಲೆ ಕೆಡಿಸಿಕೊಳ್ಳಲು" ತಯಾರಿಲ್ಲದಿರುವುದು ಅವರ ಪ್ರಯತ್ನಗಳಿಗೆ ಅಡ್ಡಿಯಾಗಿದೆ.**

ಈವರ್ಷ ಬೆಳೆಗಾರರ ಸಂಸ್ಥೆಗಳು ಹಾಗೂ ಪ್ರಮುಖಬೆಳೆಗಾರರು ಸಹಾಯಕ್ಕಾಗಿ ಸರ್ಕಾರಕ್ಕೆ ಮೊರೆ ಇಡುತ್ತಿದ್ದಾರೆ. ಆದರೆ ಬೆಳೆಗಾರರು ಸ್ವಲ್ಪವಾದರೂ ಆಲೋಚನೆ, ಶ್ರಮ, ಹಣ ಖರ್ಚುಮಾಡಲು ಕಲಿಯದಿದ್ದರೆ, ಕಷ್ಟದಿಂದ ಕಟ್ಟಿದ ಕ್ಯಾಂಪ್ಕೊ ಸಂಸ್ಥೆಯಿಂದಲೇ ಸರಿಯಾದ ಪ್ರಯೋಜನ ಪಡೆಯಲು ಯತ್ನಿಸದಿದ್ದರೆ ಸರ್ಕಾರ "ಕಟ್ಟಿ ಕೊಡುವ ಬುತ್ತಿ" ಹೆಚ್ಚು ದೂರ ಬರಲಾರದು.

## ಸಂಕ್ಷೇಪ ಸುದ್ದಿಗಳು

### ಸಿಂಡಿಕೇಟ್ ಬ್ಯಾಂಕಿನ ೩ ಶಾಖೆಗಳು

ಸಿಂಡಿಕೇಟ್ ಬ್ಯಾಂಕಿನ ಮೂರು ಗ್ರಾಮಾಂತರ ಶಾಖೆಗಳನ್ನು ನ.ರಾ.ಪುರ ತಾ॥ನ ಮುತ್ತಿನಕೊಪ್ಪ, ಗಡಿಗೇಶ್ವರ ಹಾಗೂ ಶೃಂಗೇರಿ ತಾ॥ನ ಮರ್ಕಲ್ (ಕಿಗ್ಗ)ಗಳಲ್ಲಿ ಮಾ. ೧೧ರಂದು ಮೈಸೂರು ಡಿವಿಜನಲ್ ಮ್ಯಾನೇಜರ್ ಕೇಶವರಾವ್ ಉದ್ಘಾಟಿಸಿದರು.

### ಪುನಃ ಅಕ್ರಮ ಗುಳಮಾವು ಸಾಗಣೆ?

ಒಣ ಗುಳಮಾವಿನ ತೊಪ್ಪೆ ಸಾಗಿಸುತ್ತಿದ್ದ ಲಾರಿಯೊಂದನ್ನು ಬೇಗಾರು ಗ್ರಾಮಸ್ಥರು ಪಂಚಾಯ್ತಿ ಅಧ್ಯಕ್ಷರ ನೇತೃತ್ವದಲ್ಲಿ ವಶಪಡಿಸಿಕೊಂಡು ಅಧಿಕಾರಿಗಳಿಗೊಪ್ಪಿಸಿದ್ದಾರೆ. ಕಿಗ್ಗ ಫಾರೆಸ್ಟರ್ ಈ ಭಾಗದಲ್ಲೆಲ್ಲೂ ಕೇಳರಿಯದ 'ಪುಷ್ಪಲಿ ಚಕ್ಕೆ'ಗೆಂದು ಪರ್ಮಿಟ್ ಕೊಟ್ಟಿದ್ದು, ವಲಯಾಧಿಕಾರಿಯಿಂದ ೨ ದಿನ ವಿಳಂಬ ಎಲ್ಲವೂ ಗ್ರಾಮಸ್ಥರಲ್ಲಿ ಶಂಕೆ ಹುಟ್ಟಿಸಿವೆ. ಕಳೆದ ವರ್ಷ ಇದೇ ಮಾರಿಗೆ ಲಕ್ಷಾಂತರ ರೂ. ತೊಪ್ಪೆ ಅಕ್ರಮ ಸಾಗಣೆಯಾದದ್ದು ಓದುಗರಿಗೆ ಜ್ಞಾಪಕವಿರಬಹುದು.

### ಹಿರೇಕೊಡಿಗೆ ದೂರವಾಣಿ ಕೇಂದ್ರ

ಕೊಪ್ಪಕ್ಕೆ ಸಂಪರ್ಕಿತವಾದ, ೫೦ ಲೈನುಗಳ ಹಿರೇಕೊಡಿಗೆ ದೂರವಾಣಿ ಕೇಂದ್ರವನ್ನು ಕರ್ನಾಟಕ ವಲಯ ಜನರಲ್ ಮ್ಯಾನೇಜರ್ ಬಿ.ಎಸ್.ಜಿ.ಕೆ.ಶೆಟ್ಟಿ ಮಂಗಳೂರು ಏರಿಯಾ ಡೈರೆಕ್ಟರ್ ಜೆ.ಹೆಚ್.ಭಟ್ ಅಧ್ಯಕ್ಷತೆಯಲ್ಲಿ ಮಾ. ೨೧ರಂದು ಉದ್ಘಾಟಿಸಿದರು.

## ೪ನೇ ವೇತನ ಆಯೋಗದ ವಿರುದ್ಧ ಕೇಂದ್ರ ಸರ್ಕಾರಿ ನೌಕರರ ಪ್ರದರ್ಶನ

ಕೊಪ್ಪ: ಬೇರೆ ಉದ್ಯಮ ರಂಗಗಳಲ್ಲಿರುವಂತೆ ಕೇಂದ್ರ ಸರ್ಕಾರಿ ನೌಕರರ ವಿಷಯದಲ್ಲೂ ನೇರ ಸಂಧಾನದ ಕ್ರಮದಿಂದ ಬೇಡಿಕೆಗಳ ಇತ್ಯರ್ಥ ನಡೆಯಬೇಕೆಂಬ ನೌಕರರ ಕೋರಿಕೆ ಧಿಕ್ಕರಿಸಿ ಕೇಂದ್ರ ಸರ್ಕಾರ ೪ನೇ ವೇತನ ಆಯೋಗ ನೇಮಿಸುವ ನಿರ್ಧಾರ ಕೈಗೊಂಡಿರುವುದನ್ನು ಪ್ರತಿಭಟಿಸಲು ಹಾಗೂ ವೇತನ ಪುನರ್ ವಿಮರ್ಶೆಯವರೆಗೆ ಮಧ್ಯಂತರ ಪರಿಹಾರ ಕೊಡುವಂತೆ ಒತ್ತಾಯಿಸಲು ಇಲ್ಲಿನ ಅಂಚೆ-ತಂತಿ, ದೂರವಾಣಿ, ಕಾಫಿ ಮಂಡಳಿ ಮತ್ತು ಏಲಕ್ಕಿ ಮಂಡಳಿಗಳ ನೌಕರರು ಮಾ. ೧೬ ರಂದು ಸಂಜೆ ಪ್ರತಿಭಟನಾ ಮೆರವಣಿಗೆ ನಡೆಸಿದರು. ನಂತರದ ಸಭೆಯಲ್ಲಿ ಶ್ರೀಧರ ಶೆಟ್ಟಿ ಮತ್ತು ಲಕ್ಷ್ಮೀನಾರಾಯಣ್ ಮಾತನಾಡಿ ತಮ್ಮ ನ್ಯಾಯಯುತವಾದ ಬೇಡಿಕೆಗಳ ಈಡೇರಿಕೆಗೆ ಸಂಘಟಿತ ಹೋರಾಟಕ್ಕೆ ಕರೆ ಕೊಟ್ಟರು. (ವರದಿ: ಕೃಷ್ಣರಾವ್)

### ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿ

# ಎಮ್ಮೆ ಸಾಲ: ಒಂದು ಕರಡು ಸಮೀಕ್ಷೆ

ಮಾ. ೧೨ರ ಶನಿವಾರ ಮಧ್ಯಾಹ್ನ ಜಯಪುರದಲ್ಲಿ ಹದಿನೈದಿಪ್ಪತ್ತು ಜನ ಬಡವರು ಬಿಡಿಒ ಬರುತ್ತಾರೆಂದು ಅರ್ಜಿಗಳೊಂದಿಗೆ ಕಾದುಕೊಂಡಿದ್ದರು. ಆದರೆ ಬೇರೆ ಕೆಲಸದ ನಿಮಿತ್ತ ಬಿಡಿಒ ಬರಲಿಲ್ಲವಂತೆ. ಸಂಜೆ ಆರೂವರೆಯವರೆಗೂ ಅವರೆಲ್ಲ ಕಾದು ಹಿಂವಕ್ಕೆ ಹೋದರು.

ಅವರೆಲ್ಲ ಜಯಪುರದ ಸುತ್ತ ಮುತ್ತಲ ಕೃಷಿ ಕಾರ್ಮಿಕರು. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ಬ್ಯಾಂಕ್ ಸಾಲಗಳ ಮೂಲಕ ೧,೮೦೦ರಿಂದ ೨,೪೦೦ ರೂ.ವರೆಗೆ ಬೆಲೆ ತೆತ್ತು ೧ ಅಥವಾ ೨ ಎಮ್ಮೆ ಕೊಂಡವರು. ದಾವಣಗೆರೆಯಿಂದ ತರಿಸಿದ ಈ ಎಮ್ಮೆಗಳು ತಂದ ನಾಲ್ಕೈದು ತಿಂಗಳೊಳಗೇ ಹಾಲು ಕೊಡುವುದು ನಿಲ್ಲಿಸಿವೆಯಂತೆ. "ಹೇಗೋ ಕಷ್ಟದಿಂದ ಇದ್ದಬದ್ದುದೆಲ್ಲ ಖರ್ಚು ಮಾಡಿ ಎಮ್ಮೆಗಳನ್ನು ಚೆನ್ನಾಗಿಟ್ಟುಕೊಂಡಿದ್ದೇವೆ. ಇನ್ನೊಂದು ಕರಾವಿನ ಹೊತ್ತಿಗಾದರೂ ಊರಿಗೆ, ಹವೆಗೆ ಒಗ್ಗಿಕೊಂಡು ಹಾಲು ಕೊಟ್ಟೀತೆಂಬ ಆಸೆಯಿಂದ ಸಾಕುತ್ತಿದ್ದೇವೆ. ಆದರೆ ಬ್ಯಾಂಕ್ ಸಾಲದ ಕಂತು ಕಟ್ಟಲು ಆಗಿಲ್ಲ. ಈಗ ಎಲ್ಲರಿಗೂ ನೋಟೀಸು ಬಂದಿದೆ. ವಿಚಾರಿಸಿದರೆ 'ಜಪ್ತಿ ಮಾಡ್ತೀವಿ, ಪೋಲೀಸಿಗೆ ಕೊಡ್ತೀವಿ' ಅಂತ ಹೆದರಿಸುತ್ತಿದ್ದಾರೆ. ಹೇಗಾದರೂ ಮಾಡಿ ಈಗಿನ ೫ ವರ್ಷದ ಕಂತನ್ನು ಹತ್ತು ವರ್ಷಕ್ಕೆ ಮಾಡಿಕೊಟ್ಟರೆ ಅಷ್ಟರಲ್ಲಿ ಸಾಲ ತೀರಿಸುತ್ತೇವೆ...." ಎಂದು ಬಿಡಿಒ ರವರನ್ನು ಅವರೆಲ್ಲ ಕೇಳಬೇಕೆಂದಿದ್ದರು.

#### ಸಮಸ್ಯೆಗಳ ಸಿಕ್ಕು

ಸಾಲ ಸೌಲಭ್ಯಗಳ ಮೂಲಕ 'ಬಡತನ ದರೇಖೆ'ಗಿಂತ ಕೆಳಗಿರುವವರನ್ನು ಸ್ವಾವಲಂಬಿಗಳಾಗಿ ಮಾಡುವ ಸರ್ಕಾರದ ಘೋಷಣೆಯಲ್ಲಿ ಆಶೆ ನೆಟ್ಟು, ಕೂಲಿಯಿಲ್ಲದ ಸ್ವತಂತ್ರ ಜೀವನದ ಕನಸು ಕಂಡು ಎಮ್ಮೆ ಕೊಂಡ ನೂರಾರು ಜನ ಈಗ ಸಮಸ್ಯೆಗಳ ಸಿಕ್ಕಿನಲ್ಲಿ ಸಿಕ್ಕಿಹಾಕಿಕೊಂಡಿರುವುದಾಗಿ ಹೇಳುತ್ತಾರೆ.

ಒಳ್ಳೆಯ ಎಮ್ಮೆಗಳು, ಅವಕ್ಕೆ ಕೊಟ್ಟಿಗೆ, ೩ ತಿಂಗಳಿಗಾಗುವಷ್ಟು ಹಿಂಡಿ, ಸುಲಭ ಬೆಲೆಗೆ ದಿನವೂ ಬೇಕಾಗುವಷ್ಟು ಹಸಿ ಹುಲ್ಲು, ಪಶುವೈದ್ಯರಿಂದ ಉಚಿತ ಚಿಕಿತ್ಸೆ, ದಿನವೂ ಹಾಲನ್ನು ನ್ಯಾಯವಾದ ಬೆಲೆಗೆ ಕೊಳ್ಳುವ ಸರ್ಕಾರಿ ಡಿಪೊ, ಎಮ್ಮೆ ಕೊಳ್ಳಲು ಕೇವಲ ಶೇ. ೪ರ ಬಡ್ಡಿ, ಎಮ್ಮೆ ಅಕಸ್ಮಾತ್ ಸತ್ತರೆ ಇನ್‌ಶೂರೆನ್ಸ್.... ಮುಂತಾದ ವಿವರಗಳು ಬಡವರಿಗೆ ಆಸೆ ಹುಟ್ಟಿಸಿದ್ದವು.

ಆದರೆ, ಎಮ್ಮೆಗಳು ಮನೆಗೆ ಬಂದವು. ಕೊಟ್ಟಿಗೆ ಕಟ್ಟಿಸಿಕೊಳ್ಳಲು ಹಣ ಬಂತು. ತಳಕ್ಕೆ ಹಾಸಲು ಕಲ್ಲು ಚಪ್ಪಡಿಗಳೂ ಬಂದವು — ಆಯಾಯ ಮನೆಗೆ ಸಮೀಪದ ಗಾಡಿ ರಸ್ತೆಯವರೆಗೆ. ಆದರೆ ಮುಖ್ಯವಾದ ಅಂಶಗಳಾದ ಹಸಿ ಹುಲ್ಲು, ಹಿಂಡಿ ಸರಬರಾಜಾಗಲಿಲ್ಲ. ಸಿಕ್ಕಿದಷ್ಟು ಹಾಲನ್ನೂ ಸರಿಯಾದ ರೀತಿ ಮಾರಲು ಅನುಕೂಲವಿಲ್ಲ. ಸಮೀಪದ ಪೇಟೆಗಳಲ್ಲಿ ಅಂಥ ಬೇಡಿಕೆಯಿಲ್ಲ. ಜಯಪುರದಂಥ ಕಡೆ ಹಾಲಿಗೇನೋ ಬೇಡಿಕೆಯಿದೆಯಾದರೂ ಹತ್ತಾರು ಜನ ಒಟ್ಟೊಟ್ಟಿಗೇ ಹತ್ತಾರು ಮನೆಗಳಲ್ಲಿ 'ವರ್ತನೆ' ಹುಡುಕಿಕೊಳ್ಳುವುದು ಸುಲಭದ ಮಾತಲ್ಲ. ಹೋಟೆಲ್‌ನವರ ಮರ್ಜಿ ಸ್ಥಿರವಿಲ್ಲ. ದಿನವೂ ಕೂಲಿಯನ್ನೂ ಮಾಡಿಕೊಂಡು, ಇಷ್ಟೆಲ್ಲ ಪಾಡುಪಟ್ಟು ಅಷ್ಟಿಷ್ಟು ಹಾಲು ಮಾರಿದರೂ ಎಮ್ಮೆಯ ಹೊಟ್ಟೆಗೇ ಸಾಕಾಗುವುದಿಲ್ಲ. ಉದಾಹರಣೆಗೆ — ಎಲ್ಲರೂ ಎಮ್ಮೆ ತರುವಾಗ ಹೊತ್ತಿಗೆ ೩,೪,೫ ಲೀಟರ್ ಹಾಲು ಕರೆಯುತ್ತೆ ಎಂದುಕೊಂಡೇ ತಂದಿದ್ದಾರೆ. ಸರಾಸರಿ ಯಾರಿಗೂ ದಿನಕ್ಕೆ ಮೂರು — ಮೂರೂವರೆ ಲೀ.ಗಿಂತ ಹೆಚ್ಚು ಹಾಲು ಸಿಕ್ಕಿಲ್ಲ. ಹೆಚ್ಚೆಂದರೆ ೩ ಲೀಟರನ್ನು ನೀರು ಸೇರಿಸಿ ದಿನಕ್ಕೆ ನಾಲ್ಕು — ನಾಲ್ಕೂವರೆ ಲೀ. ಮಾಡಿ ಮಾರಿದರೂ ೯–೧೦ರೂ.ಗಿಂತ ಹೆಚ್ಚಿಗೆ ಸಿಗುವುದಿಲ್ಲ. ಒಂದು ದಿನಕ್ಕೆ ಒಂದು ಎಮ್ಮೆಯ ಹೊಟ್ಟೆಗೆ ಎಷ್ಟು ಬೇಕು?

ಕನಿಷ್ಠ ೨ ಕಿಲೋ ಹಿಂಡಿ, ಒಂದು ಕಿಲೊ ಬೂಸ, ೧ ಕಿಲೋ ತೌಡು, ೮ರಿಂದ ೧೦ ಕಟ್ಟು ಹುಲ್ಲು — ಇಷ್ಟಕ್ಕೇ ೧೦ರೂ.ಗೂ ಹೆಚ್ಚು ಬೇಕು. ಹಿಂಡಿ–ಬೂಸ ತಿನ್ನದೆ ಬದುಕಲು ಅವೇನು ಮಲೆನಾಡು ಗಿಡ್ಡಗಳಲ್ಲ. ಹಸಿ ಹುಲ್ಲು ಸಾಕಷ್ಟು ಸಿಕ್ಕಿದ್ದರೆ ಹಿಂಡಿ–ಬೂಸ ಬಹಳ ಕಮ್ಮಿ ಸಾಕಾಗುತ್ತಿತ್ತು.

ಇದರ ಮೇಲೆ ಎಮ್ಮೆಗಳಿಗೆ ಕಾಯಿಲೆಯಾದಾಗ ಎಲ್ಲಿಂದಲೂ ಸಹಾಯವಿಲ್ಲ. ಒಂದೊಂದು ಸಲಕ್ಕೆ ೮–೧೦ರೂ. ಖರ್ಚು ಮಾಡಿ ಔಷಧಿ ಮಾಡಿಸುವುದು ಆಟವಲ್ಲ. ಮಾಡದಿದ್ದರೆ ಗಂಟೇ ಮುಳುಗೀತು. ಹಾಗೂ ಒಂದೆರಡು ಎಮ್ಮೆಗಳು ಸತ್ತಿವೆ. ಅವುಗಳ ಇನ್‌ಶೂರೆನ್ಸ್ ಬಗ್ಗೆ ಕೂಡ ಬಡವರಿಗೆ ತಕರಾರು ಮಾಡುತ್ತಾರೆಂದು ಅವರು ಹೇಳಿಕೊಳ್ಳುತ್ತಾರೆ ("ನೀನು ಹೊಟ್ಟೆಗೆ ಹಾಕದೆ ಸಾಯಿಸಿದ್ದೀ. ಆದ್ದ್ರೆ ಇನ್‌ಶೂರೆನ್ಸ್ ಕೊಡಿಸಲು ಆಗುವುದಿಲ್ಲ" ಎಂದು ಜೋರು ಮಾಡುತ್ತಾರಂತೆ.)

ಇಷ್ಟೆಲ್ಲ ಕಷ್ಟಗಳ ನಡುವೆಯೂ ತಕ್ಕಮಟ್ಟಿಗೆ ಎಲ್ಲರೂ ಎಮ್ಮೆಗಳನ್ನು ಚೆನ್ನಾಗಿ ಇಟ್ಟುಕೊಂಡಿದ್ದಾರೆ. ಎಮ್ಮೆ ಕರು ಬದುಕುವುದು ಕಷ್ಟ. ಆದರೆ ಇಲ್ಲಿ ಹಲವು ಕರುಗಳೂ ಬದುಕಿವೆ.

(೩ನೇ ಪುಟಕ್ಕೆ)

## ಒಂದರ ಪಕ್ಕದಲ್ಲೇ ಇನ್ನೊಂದು ಬೋರ್‌ವೆಲ್!

ಕೊಪ್ಪ: ಸಮೀಪದ ಕೊಪ್ಪ ಎಸ್ಟೇಟ್ ಬಳಿಯ ಬಸವನ ಗದ್ದೆ ಗ್ರಾಮಕ್ಕೆ (ಈಗ ರಾಘವೇಂದ್ರ ನಗರ) ಮಂಜೂರಾಗಿದ್ದ ಕೊಳವೆ ಬಾವಿಯನ್ನು, "ಭೂಗರ್ಭ ಶಾಸ್ತ್ರಜ್ಞರ ಸಲಹೆಯ ಮೇರೆಗೆ" ಎಂಬ ನೆಪವೊಡ್ಡಿ, ಈಗಾಗಲೇ ಇರುವ ಕೊಳವೆ ಬಾವಿಯ ಪಕ್ಕದಲ್ಲೇ ತೋಡಿರುವುದಾಗಿ ಗ್ರಾಮಸ್ಥರು ದೂರಿದ್ದಾರೆ.

ಹಳೆಯ ಬಾವಿಯನ್ನಾದರೂ ಸರಿಯಾಗಿ ತೋಡದೆ ಅದರಿಂದ ಕೆಸರು ಮಾತ್ರ ಬರುತ್ತಿದ್ದು, ತಮ್ಮ ಮನವಿಗೆ ಬಾವಿ ತೋಡುವವರು ಗಮನವನ್ನೇ ಕೊಡಲಿಲ್ಲ ಎಂದು ಗ್ರಾಮಸ್ಥರು ತಿಳಿಸಿದ್ದಾರೆ.



# ಹೋರಾಟ ಬೇಕು

ಶೇಕಡಾ ೯೯ಕ್ಕಿಂತಲೂ ಹೆಚ್ಚಾಗಿರುವ ಸತ್ಪ್ರಜೆಗಳು ಶೇಕಡಾ ೧ಕ್ಕಿಂತಲೂ ಕಡಿಮೆ ಇರುವ ಗೂಂಡಾವಲಂಬಿತ ಬಂಡವಾಳಶಾಹಿಗಳ ಶೋಷಣೆ, ಹಲ್ಲೆಗೆ ಒಳಗಾಗುತ್ತಿದ್ದಾರೆ. ಇದು ಯಾವುದೇ ಚಿಕ್ಕ ಹಳ್ಳಿಯ ಸಮಾಜಕ್ಕೂ ಸತ್ಯವಾದ ಮಾತು. ಈ ಬಂಡವಾಳ ಶಾಹಿ ಶೋಷಕರ ಕೈಯಲ್ಲಿ ಗೂಂಡಾಶಕ್ತಿ, ಪೋಲೀಸ್ ಶಕ್ತಿ, ಸರಕಾರಿ ಯಂತ್ರ, ಕೋರ್ಟು, ಮಂತ್ರಿಗಳು ಇರುವುದರಿಂದ ಅವರು ಯಾರನ್ನೂ ಹೊಸಕಿ ಹಾಕಬಲ್ಲರು. ಮನುಷ್ಯ ಹಿಂಸೆ, ಸಾವಿಗೆ ಹೆದರುತ್ತಾನೆ. ಈ ಬಂಡವಾಳ ಶಾಹಿಗಳ ಕೈಯಲ್ಲಿ ಹಿಂಸೆಯ ಸಾಧನಗಳಿರುತ್ತವೆ. ನಮ್ಮ ಸಮಾಜವನ್ನು ನಿಜವಾಗಿ ಆಳುವವರು ಇವರೆ.

ಈ ದೇಶದ ಸತ್ಪ್ರಜೆಗಳು ಯಾಕೆ ಇದನ್ನು ಪ್ರತಿಭಟಿಸುವುದಿಲ್ಲ? ಒಂದನೆಯದಾಗಿ ವಿದ್ಯೆಯ ಕೊರತೆ; ಆ ಕಾರಣದಿಂದಾಗಿ ಒಗ್ಗಟ್ಟು ಇಲ್ಲದಿರುವುದು.

ಆದರೂ ಗೂಂಡಾವಲಂಬಿತ ಬಂಡವಾಳ ಶಾಹಿಗಳ ವ್ಯವಸ್ಥೆಯನ್ನು ಒಡೆಯುವುದು ಕಷ್ಟದ ಕೆಲಸವಲ್ಲ. ಮೊದಲನೆಯದಾಗಿ ಬೇಕಾದ್ದು ಒಗ್ಗಟ್ಟು ಮತ್ತು ಧೀರ ನಾಯಕತ್ವ. ನೀರು, ವಿದ್ಯುಚ್ಛಕ್ತಿ, ರೇಶನ್ನಿನ ಕೊರತೆ, ಗೂಂಡಾಗಿರಿ, ಅಸ್ಪೃಶ್ಯತೆ, ಶೋಷಣೆ, ಬೆಲೆ ಏರಿಕೆ, ರೈತರಿಗೆ ದೊರಕುವ ಕಡಿಮೆ ಬೆಲೆ ಮುಂತಾದ ತಮ್ಮ ಎಲ್ಲಾ ಸಮಸ್ಯೆಗಳ ವಿರುದ್ಧ ಹೋರಾಡಬೇಕು. ನಮ್ಮ ಸಮಾಜ ಇಂತಹ ಪ್ರತಿಭಟನಾ ಶಕ್ತಿಯನ್ನು ಮೈಗೂಡಿಸಿಕೊಂಡಲ್ಲಿ ಸಮಾನತೆ, ಸ್ವಾತಂತ್ರ್ಯಗಳು ತಾನೇ ತಾನಾಗಿ ಲಭಿಸುತ್ತವೆ. ಬಡವರ, ಹರಿಜನರ ಹಿತ ರಕ್ಷಣೆಯ 'ದಲಿತ ಸಂಘರ್ಷ ಸಮಿತಿ', ಬಳಕೆದಾರರ ಹಿತರಕ್ಷಣೆಯ 'ಬಳಕೆದಾರರ ವೇದಿಕೆ', ರೈತ ಪರವಾದ ರೈತ ಚಳವಳಿ ಇಂತಹ ನಿಟ್ಟಿನಲ್ಲಿ ಹೊಸ ಹೆಜ್ಜೆ. ಇಂತಹ ಇನ್ನೂ ಹೊಸ ಹೊಸ ಚಳವಳಿಗಳನ್ನು ಜನರೇ ಕಂಡುಹಿಡಿದು ತಮ್ಮನ್ನು ರಕ್ಷಿಸಿಕೊಳ್ಳಬೇಕು. ಈ ದೇಶದಲ್ಲಿ ಸಾಮಾನ್ಯ ಜನರನ್ನು ಯಾರಾದರು ರಕ್ಷಿಸುತ್ತಾರೆಂಬುದು ಕನಸಿನ ಮಾತು. ನಮ್ಮ ನಿಮ್ಮ ರಕ್ಷಣೆಗೆ ನಾವೇ ಹೊಣೆಗಾರರು. ಅದು ಸಾಧ್ಯವಲ್ಲದ ಕೆಲಸವೇನೂ ಅಲ್ಲ.

ನಮ್ಮ ವಾತಾವರಣದ ಕುರಿತು ಎಚ್ಚರವಿರಲಿ. ಇವತ್ತು ಒಬ್ಬನ ಸಮಸ್ಯೆ ನಾಳೆ ಇನ್ನೂ ಹಲವರ ಅಥವಾ ಎಲ್ಲರ ಸಮಸ್ಯೆ. ಜೀವನ ಸಮಸ್ಯೆಗೆ ಜೊತೆಗೂಡಿ ಹೋರಾಟ ನಡೆಯಲಿ.

—ಭವಾನಿಶಂಕರ್, ಕೊಪ್ಪ.


**'ಮುಂಜಾವು' ಪತ್ರಿಕೆಯ ಒಡೆತನ ಮತ್ತಿತರ ವಿವರಗಳ ಪ್ರಕಟಣೆ.**

**ಪ್ರಾರೂಪ 4 (ವಿಧಿ 8)**

| | | |
|---|---|---|
| 1. ಪ್ರಕಟಣೆಯ ಸ್ಥಳ | : | ಕೊಪ್ಪ, ಚಿಕ್ಕಮಗಳೂರು ಜಿಲ್ಲೆ |
| 2. ಪ್ರಕಟಣೆಯ ನಿಯತಕಾಲಿಕತೆ | : | ವಾರ ಪತ್ರಿಕೆ |
| 3. ಸಂಪಾದಕರ, ಮುದ್ರಕರ, ಪ್ರಕಾಶಕರ ಹೆಸರು | : | ಸಿರಿಮನೆ ನಾಗರಾಜ್ |
| ಭಾರತದ ಪ್ರಜೆಯೆ? | : | ಹೌದು |
| ವಿಳಾಸ | : | 'ಮುಂಜಾವು' ವಾರಪತ್ರಿಕೆ ತಿಲಕ್ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ |
| 4. ಪತ್ರಿಕೆಯ ಒಡೆತನ ವಹಿಸಿರುವ ವ್ಯಕ್ತಿಗಳ ಮತ್ತು ಪಾಲುದಾರರ ಅಥವಾ ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚು ಭಾಗಕ್ಕೆ ಪಾಲುದಾರರಾದವರ ಹೆಸರು ಮತ್ತು ವಿಳಾಸ | | ಸಿರಿಮನೆ ನಾಗರಾಜ್ ತಿಲಕ್ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ |

ಮೇಲೆ ಕೊಟ್ಟಿರುವ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನನ್ನ ನಂಬಿಕೆಯಂತೆ ನಿಜವೆಂದು ನಾನು, ಸಿರಿಮನೆ ನಾಗರಾಜ್, ಘೋಷಿಸುತ್ತೇನೆ.

ದಿನಾಂಕ 27–3–83

ಪ್ರಕಾಶಕ
(ಸಹಿ) ಸಿರಿಮನೆ ನಾಗರಾಜ್
'ಮುಂಜಾವು' ವಾರಪತ್ರಿಕೆ, ಕೊಪ್ಪ,
ಚಿಕ್ಕಮಗಳೂರು ಜಿಲ್ಲೆ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿ

# ಎಮ್ಮೆ ಸಾಲ: ಒಂದು ಕರಡು ಸಮೀಕ್ಷೆ

(೨ನೇ ಪುಟದಿಂದ)

### ಕತ್ತಲೆಯಲ್ಲಿ ಬಡವರು

ಆದರೆ ಇವರಿಗೆಲ್ಲ ಈ ಸಾಲದ ಬಗ್ಗೆ ಸರಿಯಾದ ತಿಳುವಳಿಕೆ ಇದ್ದಂತಿಲ್ಲ. ಸಾಲ ಕೊಡಿಸುವ ಯೋಜನೆ ಸರ್ಕಾರದ್ದಾದರೂ ಹಣ ಕೊಟ್ಟಿರುವುದು ಬ್ಯಾಂಕುಗಳು; ಸಾಲಕ್ಕೆ ಸಂಬಂಧಪಟ್ಟ ಎಲ್ಲ ಸಮಸ್ಯೆಗಳ ಬಗೆಗೂ ಬ್ಯಾಂಕನ್ನು ಮೊದಲು ಸಂಪರ್ಕಿಸಬೇಕು–ಎಂಬುದು ಇವರಿಗೆ ಗೊತ್ತಿಲ್ಲ. ಬಡ್ಡಿದರದ ನಿರ್ಧಾರ, ತಮಗೆ ಯಾವ ಬಡ್ಡಿದರ ನಿಗದಿಯಾಗಿದೆ, ಕಂತುಗಳ ಕ್ರಮ ಹೇಗೆ — ಮುಂತಾದ ಯಾವ ವಿಷಯದ ಬಗ್ಗೆಯೂ ಇವರಿಗೆ ಸಂಪೂರ್ಣ ಕತ್ತಲು. ಯಾವುದಕ್ಕೂ ತಮ್ಮ ಗ್ರಾಮ ಪಂಚಾಯ್ತಿ ಅಧ್ಯಕ್ಷರಲ್ಲಿಗೆ ಓಡುತ್ತಾರೆ. ಅಥವಾ ಬಿಡಿಓಗೆ ಅರ್ಜಿ ಬರೆಯುತ್ತಾರೆ. ಅಲ್ಲಿ–ಇಲ್ಲಿ ಗೊತ್ತು ಗುರಿಯಿಲ್ಲದೆ ಅಲೆಯುತ್ತಾರೆ. ಹೀಗಾಗಿ, ಎಲ್ಲರಿಗೂ ಶೇ. ೪ ಬಡ್ಡಿ ಎಂದುಕೊಂಡಿದ್ದವರು ಕೆಲವರಿಗೆ ಬಡ್ಡಿದರ ಶೇ. ೧೦.೫ ಎಂದು ತಿಳಿದಾಗ ತಾವು ಕಂತು ಕಟ್ಟದೆ ಇದ್ದುದಕ್ಕೆ ಬಡ್ಡಿ ಏರಿಸಿದ್ದಾರೆ ಎಂದು ಕೊಳ್ಳುತ್ತಾರೆ. ನೋಟೀಸಿನಲ್ಲಿ ತಮ್ಮ ಹೆಸರಲ್ಲಿ ಬಾಕಿಯಿರುವ ಒಟ್ಟು ಸಾಲದ ಮೊಬಲಗನ್ನು ಕಾಣಿಸಿದ್ದರೆ ಅಷ್ಟನ್ನೂ ಒಟ್ಟಿಗೆ ಕಟ್ಟಲು ಕೇಳಿದ್ದಾರೆಂದು ಕೊಳ್ಳುತ್ತಾರೆ. ಇತ್ಯಾದಿ.

ಒಂದು ಬ್ರಾಹ್ಮಣ ಕುಟುಂಬ ಚೆನ್ನಾಗಿ ಹಾಲು ಸಂಪಾದಿಸಿದ್ದಾರೆ. ಬಹುಶಃ ಬ್ಯಾಂಕಿಗೂ ಒಂದಿಷ್ಟು ಕಟ್ಟಿದ್ದಾರೆ. ಈಗ ೨ನೇ ಎಮ್ಮೆಯನ್ನೂ ತಂದಿದ್ದಾರೆ. ಆದರೆ ಮೊದಲ ಎಮ್ಮೆ ಹಾಲು ಮರೆಸಿಕೊಂಡಿದೆ. ೨ನೆಯದರ ಹಾಲಿನ ಹಣದಿಂದ ಎರಡರ ಹೊಟ್ಟೆಗೂ ಹಾಕಬೇಕಾಗಿದೆ. ಇದೇ ರೀತಿ ಪ್ರಾರಂಭದಲ್ಲಿ ಅಲ್ಪಸ್ವಲ್ಪ ಹಣವನ್ನು ಕೆಲವು ಜನ ಬ್ಯಾಂಕಿಗೆ ಕಟ್ಟಿದ್ದಿದೆ. ಆದರೆ ಅದು ಬಹಳ ಕಾಲ ಮುಂದುವರಿಯಲಿಲ್ಲ.

### ಕೆಲವು ಮಾಹಿತಿಗಳು

ಹೀಗೆ ಸಾಲ ಪಡೆದ ಬಡವರ ಕಥೆಯನ್ನು ಕೇಳಿ, ಆ ಹಿನ್ನೆಲೆಯಲ್ಲಿ ಸರಕಾರಿ ಮತ್ತು ಬ್ಯಾಂಕ್ ಮೂಲಗಳಿಂದ ಇನ್ನಷ್ಟು ವಿವರಗಳನ್ನು ಸಂಗ್ರಹಿಸಿದಾಗ ಈ ಒಂದು ಸಾಮಾಜಿಕ–ಆರ್ಥಿಕ ಕಲ್ಯಾಣ ಕಾರ್ಯಕ್ರಮದ ಚಿತ್ರ ಸ್ವಲ್ಪ ಹೆಚ್ಚು ಪೂರ್ಣವಾಗಿ ಕಾಣತೊಡಗುತ್ತದೆ.

ಉದಾಹರಣೆಗೆ ಮೇಗುಂದಾ ಹೋಬಳಿಯೊಂದನ್ನೇ ಸಮೀಕ್ಷಿಸಿದರೆ ಸಿಂಡಿಕೇಟ್ ಬ್ಯಾಂಕಿನ ಬಸರೀಕಟ್ಟೆ, ಎಲೆಮಡಲು ಶಾಖೆಗಳು, ಕೊಗ್ರೆಯ ಕಾರ್ಪೊರೇಶನ್ ಬ್ಯಾಂಕ್ ಹಾಗೂ ಜಯಪುರದ ಕರ್ನಾಟಕ ಬ್ಯಾಂಕ್ ಒಟ್ಟಿಗೆ ಹೋಬಳಿಯಲ್ಲಿ ಸುಮಾರು ೪೦೦ಕ್ಕೂ ಹೆಚ್ಚು ಎಮ್ಮೆಗಳಿಗೆ ಸ.ಗ್ರಾ.ಯೋಜನೆಯಡಿ ಸಾಲ ಒದಗಿಸಿವೆ. ಇವರಲ್ಲಿ ಬಸರೀಕಟ್ಟೆ ಬ್ಯಾಂಕಿನದೇ ಸಿಂಹಪಾಲು.

ಕರ್ನಾಟಕ ಹೈನುಗಾರಿಕೆ ಅಭಿವೃದ್ಧಿ ಸಂಸ್ಥೆ (ಡೈರಿ ಡೆವೆಲಪ್‌ಮೆಂಟ್ ಕಾರ್ಪೊರೇಶನ್—ಕೆ.ಡಿ.ಡಿ.ಸಿ.) ಮಲೆನಾಡಿನ ಈ ಭಾಗದಲ್ಲಿ ಹೈನುಗಾರಿಕೆ ವಿಸ್ತರಣೆಗೆ ವ್ಯಾಪಕ ಯೋಜನೆಯೊಂದನ್ನು ಹಾಕಿಕೊಂಡಿತ್ತು. ಹಾಸನದ ಹಾಲು ಸಂಶೋಧನ ಕೇಂದ್ರಕ್ಕೆ ಪೂರಕವಾಗಿ ಕೊಪ್ಪದಲ್ಲಿ ಒಂದು ಮುಖ್ಯ ಹಾಲು ಶೈತ್ಯೀಕರಣ ಘಟಕ ಹಾಗೂ ಬಾಳೆಹೊನ್ನೂರು–ನ.ರಾ.ಪುರಗಳಲ್ಲಿ ಈ ಘಟಕಕ್ಕೆ ಪೂರಕವಾಗಿ ೨ ಶೈತ್ಯೀಕರಣ ಉಪಘಟಕಗಳು, (ಈಗ ಜಯಪುರದಲ್ಲೂ ಒಂದು), ಹಾಲು ಸಂಗ್ರಹಣೆಗೆ ಅಲ್ಲಲ್ಲಿ ಡಿಪೋಗಳು, ಅದನ್ನು ಸಾಗಿಸಲು ನಿರ್ದಿಷ್ಟ ಮಾರ್ಗದಲ್ಲಿ ಸಂಚರಿಸುವ ಸ್ವಂತ ವ್ಯಾನುಗಳು (ಮಿಲ್ಕ್‌ರೂಟ್—ಹಾಲು ಮಾರ್ಗಗಳು), ಹಸಿಹುಲ್ಲು ಬೆಳೆಸಿ ಯೋಗ್ಯ ಬೆಲೆಯಲ್ಲಿ ಸರಬರಾಜು, ಜಾನುವಾರುಗಳಿಗೆ ವೈದ್ಯಕೀಯ ಚಿಕಿತ್ಸೆಗೆ ಸಮರ್ಥವಾದ ವ್ಯವಸ್ಥೆ, ಉತ್ತಮ ತಳಿಗಳ ಜಾನುವಾರುಗಳ ಸರಬರಾಜು—ಮುಂತಾಗಿ ಕೆಡಿಡಿಸಿ ಮಹತ್ತರ ಯೋಜನೆ ಹಾಕಿತ್ತು.

ಅದೇ ಸಂದರ್ಭಕ್ಕೆ ಕೇಂದ್ರ ಸರ್ಕಾರದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ೧೯೮೦ರ ಅಕ್ಟೋಬರಿನಲ್ಲಿ ದೇಶಾದ್ಯಂತ ಜಾರಿಗೆ ಬಂತು. ಆ ವರೆಗೆ ಜಾರಿಯಲ್ಲಿದ್ದ "ಸಣ್ಣ ರೈತರ ಅಭಿವೃದ್ಧಿ ಯೋಜನೆ"ಯೇ ಕೃಷಿ ಕಾರ್ಮಿಕರು, ಕುಶಲ ಕರ್ಮಿಗಳು, ಹರಿಜನ–ಗಿರಿಜನರು ಮುಂತಾಗಿ ಬಡತನದ ರೇಖೆಯ ಕೆಳಗಿರುವ ಎಲ್ಲರನ್ನೂ ಒಳಗೊಳ್ಳುವಂತೆ ಮಾರ್ಪಾಟಾಗಿ, ಅವರನ್ನು ಸ್ವಾವಲಂಬಿಗಳಾಗಿ ಮಾಡುವ ಉದ್ದೇಶದಿಂದ ವಿವಿಧ ಕಸುಬು ಮತ್ತು ಉದ್ಯಮಗಳಿಗೆ ಸುಲಭದಲ್ಲಿ ಸಾಲ ಸೌಲಭ್ಯ ಕಲ್ಪಿಸುವ ಗುರಿ ಹೊಂದಿತ್ತು. ಅದರಲ್ಲಿ ಹೈನುಗಾರಿಕೆಯೂ ಸೇರಿದ್ದು, ಒಂದು ಕುಟುಂಬಕ್ಕೆ ಹೆಚ್ಚೆಂದರೆ ೬,೫೦೦ ರೂ.ವರೆಗೆ ಸಾಲ ದೊರೆಯುತ್ತಿತ್ತು. ಅದರಲ್ಲಿ ೨ ಎಮ್ಮೆ ಮತ್ತು ಅದಕ್ಕೆ ಬೇಕಾದ ಪರಿಕರಗಳಿಗೆ ಹಣ ಗೊತ್ತುಪಡಿಸಲಾಗಿತ್ತು.

ಈ ಯೋಜನೆಯನ್ನು ಹೈನುಗಾರಿಕೆ ನಿಗಮದ ಯೋಜನೆಗೆ ಬೆಸೆದು, ಈ ಪ್ರದೇಶದ ದುರ್ಬಲರಿಗೆ ಹೈನುಗಾರಿಕೆಯಿಂದ ಸ್ವತಂತ್ರ ಜೀವನೋಪಾಯ ಕಲ್ಪಿಸಲು ಸರ್ಕಾರಿ ಅಂಗವಾದ "ಜಿಲ್ಲಾ ಗ್ರಾಮಾಭಿವೃದ್ಧಿ ಸಂಸ್ಥೆ" (ಡಿ.ಆರ್.ಡಿ.ಎಸ್.) ಹೆಜ್ಜೆ ಇಟ್ಟಿತು. ಅದರಂತೆ, ಕೆಡಿಡಿಸಿಯ ಯೋಜನೆಗಳಿಗೆ ಈ ಸಂಸ್ಥೆ ೬.೫ ಲಕ್ಷ ರೂ.ಗಳ ಸಹಾಯ ಧನದನ್ನು ಅಕ್ಟೋಬರ್ ೮೧ರಲ್ಲೇ ಸಲ್ಲಿಸಿತು.

ಹಳ್ಳಿಗಳಲ್ಲಿ ಪ್ರತಿ ಕುಟುಂಬದ ಆದಾಯ ಪತ್ತೆಹಚ್ಚಿ ಬಡತನದ ರೇಖೆಗಿಂತ ಕೆಳಗಿರುವವರನ್ನು ಗುರ್ತಿಸಲಾಯಿತು ಹಾಗೂ ಎಮ್ಮೆ ಸಾಲ ಪಡೆಯುವ ಬಗ್ಗೆ ವ್ಯಾಪಕ ಪ್ರಚಾರ ನಡೆಸಲಾಯಿತು. (ಜೊತೆಗೆ ಇತರ ಯೋಜನೆಗಳೂ ಇದ್ದವಾದರೂ ಎಮ್ಮೆ ಸಾಲ ಅತ್ಯಂತ ಪ್ರಮುಖಸ್ಥಾನ ಪಡೆಯಿತು.) ಹಳ್ಳಿಯ ಬಡಜನ ತುದಿಗಾಲಲ್ಲಿ ನಿಂತರು.

ಆದರೆ ಎಲ್ಲವೂ ನೆನೆಸಿದಂತೆ ನಡೆಯಲಿಲ್ಲ. ಕೆಡಿಡಿಸಿಯ ಯೋಜನೆಗಳು ಹೆಜ್ಜೆ ಕೀಳಲಿಲ್ಲ. ಬಾಳೆಹೊನ್ನೂರಿನಲ್ಲಿ ಶೈತ್ಯಾಗಾರದ ಕಟ್ಟಡ ಸಿದ್ಧವಾದರೂ "ತಾಂತ್ರಿಕ ತೊಂದರೆ ಮತ್ತು ಯಂತ್ರೋಪಕರಣಗಳ ಕೊರತೆಯಿಂದ" ಕೆಲಸ ಶುರುವಾಗಲಿಲ್ಲ. ಕೊಪ್ಪ, ನ.ರಾ.ಪುರಗಳಲ್ಲಿ ಏನೂ ನಡೆಯಲಿಲ್ಲ. ಶೈತ್ಯಾಗಾರವೇ ಇಲ್ಲದ ಮೇಲೆ ಸಂಗ್ರಹಣೆ ಡಿಪೋ, ವ್ಯಾನು ಎಲ್ಲ ಎಲ್ಲಿ ಬಂತು?

ಆದರೆ ಚುನಾವಣೆ ಹತ್ತಿರವಾಗಿತ್ತು. ಬಡಜನರ ಏಳಿಗೆ ಆಗಲೇಬೇಕಾಗಿತ್ತು. ಜಿಲ್ಲಾ ಗ್ರಾಮಾಭಿವೃದ್ಧಿ ಸಂಸ್ಥೆ ತುರ್ತಾಗಿ ಸರ್ಕಾರಕ್ಕೆ ಯೋಜನೆಯ ಪ್ರಗತಿಯ ಲೆಕ್ಕ ಕೊಡಬೇಕಾಗಿತ್ತು.

ಅಂತೂ, ೧೮–೨–೮೨ಕ್ಕೆ ಶೈತ್ಯಾಗಾರ ಪ್ರಾರಂಭ ಎಂದು ಘೋಷಿಸಲ್ಪಟ್ಟು ೮೨ರ ಜನವರಿಯಿಂದ ಎಮ್ಮೆ ಕೊಡಲು ಪ್ರಾರಂಭವಾಯ್ತು. ಆದರೆ ಶೈತ್ಯಾಗಾರ ಉಸಿರಾಡಲು ಶುರುಮಾಡಿದ್ದು ನವೆಂಬರಿನಲ್ಲಿ. ಹಸಿಹುಲ್ಲು, ವೈದ್ಯಕೀಯ ವ್ಯವಸ್ಥೆ, ಸಂಗ್ರಹಣೆ ಡಿಪೋ ಈ ಮೂರು ಅತಿ ಮುಖ್ಯ ಸೌಲಭ್ಯಗಳನ್ನು ಒದಗಿಸಬೇಕಾಗಿದ್ದ ಕೆಡಿಡಿಸಿ ಕರ್ತವ್ಯದಲ್ಲಿ ಸೋತಾಗ, ಸರ್ಕಾರವನ್ನು ನಂಬಿದ್ದ ಬಡಜನ ಎಮ್ಮೆಗಳನ್ನು ಸಾಕುವುದು, ಹಾಲಿಗೆ ಗಿರಾಕಿ ಹುಡುಕುವುದು ಈ ಎರಡೂ ತ್ರಾಸಗಳಿಂದ ಹಣ್ಣು ಚಟ್ಟಾದರು. ಅಷ್ಟರಲ್ಲಿ ಎಮ್ಮೆಗಳು ಹಾಲು ಕೊಡುವುದು ನಿಲ್ಲಿಸಿದ್ದಲ್ಲದೆ ಪದೇ ಪದೇ ಕಾಯಿಲೆಗೆ ಈಡಾಗತೊಡಗಿದಾಗ ಬಡ ಜನಕ್ಕೆ ಉಸಿರು ಕಟ್ಟತೊಡಗಿತು.

ಇಷ್ಟಾದರೂ, **ಸರ್ಕಾರಕ್ಕೆ ಬೇಕಾದ್ದು ಸಾಲದ ಹಣ ಬಿಡುಗಡೆ ಮಾಡುವುದೇ ಹೊರತು** ಅದರ ಮರು ಪಾವತಿಯಾಗಲಿ, ಅದರಿಂದ ಸಂಪತ್ತಿನ ಅಥವಾ ಜೀವನೋಪಾಯದ ಹುಟ್ಟುವಳಿಯಾಗಲಿ ಅಲ್ಲ. ಅಥವಾ ಇದಕ್ಕೆಲ್ಲ ತಳಹದಿ ಸೌಕರ್ಯ (ಇನ್‌ಫ್ರಾಸ್ಟ್ರಕ್ಚರ್) ನಿರ್ಮಿಸುವುದಾಗಲಿ ಅಲ್ಲ ಎಂಬ ಅನುಮಾನ ಯಾರಿಗಾದರೂ ಬರುತ್ತದೆ. ಆದರೆ ಬ್ಯಾಂಕಿನವರಿಗೆ **ಕೊಟ್ಟ ಸಾಲ ಹಿಂದೆ** ಬರುವುದು ಅತಿ ಮುಖ್ಯ.

(೬ನೇ ಪುಟಕ್ಕೆ)

## ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿ

# ಎಮ್ಮೆ ಸಾಲ: ಒಂದು ಕರಡು ಸಮೀಕ್ಷೆ

(೩ನೇ ಪುಟದಿಂದ)

ಅವರು ಅದರ ಕಡೆಗೂ ಗಮನ ಕೊಡಬೇಕು.

**ಇಂಥ ಪರಿಸ್ಥಿತಿಯಲ್ಲಿ, ನಮ್ಮ ಸಮಾಜದಲ್ಲಿ ಅಷ್ಟಿಷ್ಟಾದರೂ ಮಾನವತೆ ಉಳಿದಿದ್ದರೆ, ನಮ್ಮ ಜನ ತಮ್ಮ ಸಹಮಾನವರ ದುಃಸ್ಥಿತಿಯ ಬಗ್ಗೆ ವ್ಯಾವಹಾರಿಕ, ವಾಸ್ತವ ದೃಷ್ಟಿಯಿಂದ, ನಿಜವಾದ ಸಹಾನುಭೂತಿಯಿಂದ ಚಿಂತಿಸಿ, ಕ್ರಿಯೆಗಿಳಿದಿದ್ದರೆ ಆಗಲೂ ಈ ಯೋಜನೆ ಇಷ್ಟು ಹೀನಸ್ಥಿತಿ ಮುಟ್ಟುತ್ತಿರಲಿಲ್ಲ.** [ಉದಾಹರಣೆಗೆ, ಚೀನ, ಜರ್ಮನಿ ಮುಂತಾದ ದೇಶಗಳಲ್ಲಿ ಇಂಥ ಯೋಜನೆಗಳ ಬಗ್ಗೆ ಇಡೀ ಸಮಾಜ ಆಸ್ಥೆವಹಿಸುತ್ತದಂತೆ. ಹಾಗಾಗುವುದಾಗಿದ್ದರೆ ಹಸಿಹುಲ್ಲು ಬೆಳೆಸುವುದೋ, ಹಾಲಿಗೆ ಗಿರಾಕಿ ಅಥವಾ ಸಂಗ್ರಹಣೆ ವ್ಯವಸ್ಥೆ ಒದಗಿಸುವುದೋ, ಒಂದು ಸಾಮಾಜಿಕ ಆಂದೋಲನವಾಗಬೇಕಿತ್ತು ಎನ್ನುತ್ತಾರೆ ತಜ್ಞರು.] ಆದರೆ "ನಮ್ಮ ಸಮಾಜದಲ್ಲಿ ದೀನ ದಲಿತರನ್ನು, ಹಿಂದುಳಿದವರನ್ನು ಮೇಲಕ್ಕೆತ್ತುವುದು ಸಾಧ್ಯವಿಲ್ಲ; ಅದು ಹಾಗೇ ಸರಿ; ಎಷ್ಟಿದ್ದರೂ ಅವರು ಕುಡಿದೇ ಹಾಳುಮಾಡುತ್ತಾರೆ; ಅದರಿಂದಾಗಿ ದೇಶದ ಬೊಕ್ಕಸ ಬರಿದಾಗಿ ನಾವೆಲ್ಲ ಹಿಂದುಳಿಯುತ್ತೇವೆ"—ಮುಂತಾದ ನಮ್ಮ ಸಮಾಜದ ಪೂರ್ವ ಕಲ್ಪನೆಗಳಿಂದಾಗಿ ಹಾಗೂ ಎಲ್ಲದರಲ್ಲೂ ತಮ್ಮ ಲಾಭವನ್ನೇ ನೆರವೇರಿಸಿಕೊಳ್ಳುವ ಪರಾವಲಂಬಿ ಮಧ್ಯವರ್ತಿ ಜಂತುಗಳಿಂದಾಗಿ ಎಲ್ಲ ಹಂತದಲ್ಲೂ ಯೋಜನೆಯನ್ನು ಸೋಲಿಸುವ ಪ್ರಯತ್ನವೇ ಒಳಾಂತರದಲ್ಲಿ ಕಂಡುಬರುತ್ತದೆ. ತನ್ನ ದುರ್ಬಲ ಸದಸ್ಯರ ಬಗ್ಗೆ ಸ್ವಲ್ಪವಾದರೂ ಜವಾಬ್ದಾರಿಯಿದ್ದ ಸಮಾಜವಾಗಿದ್ದರೆ, **ಎಷ್ಟೇ ಅಪ್ರಾಮಾಣಿಕ ಉದ್ದೇಶದಿಂದ ಜಾರಿಗೊಳಿಸಿದ ಯೋಜನೆಯಾಗಿದ್ದರೂ ಸಹ** ಅದನ್ನೇ ಆದಷ್ಟೂ ಸದುಪಯೋಗಪಡಿಸಲು ಪ್ರಯತ್ನಿಸುತ್ತಿತ್ತು. ಕುರಿ ಪಡೆದ ಬಡವ ಅದನ್ನು ಮಾರಲು ತಂದಾಗ ಕೊಂಡು ಕೊಂಡ ಮಾಂಸದಂಗಡಿಯವ, ಆಳಿಗೆ ಎಮ್ಮೆ ಕೊಡಿಸಿ ತನ್ನ ಕೊಟ್ಟಿಗೆಯಲ್ಲಿ ಕಟ್ಟಿಸಿಕೊಂಡ "ಧರ್ಮಿಷ್ಠ" ಧನಿಕ, ಒಂದಿ ಕೊಟ್ಟರೆ ಅರ್ಧಕ್ರಯ ಕೊಟ್ಟು ಕೊಂಡುಕೊಳ್ಳುವ ಲೋಭಿ, ಅಕ್ರಮವಾಗಿ ಬಡವರ ಪಟ್ಟಿಯಲ್ಲಿ ತಮ್ಮನ್ನು ಸೇರಿಸಿಕೊಂಡು, ಎಮ್ಮೆ ಬದಲಿಗೆ ನಗದು ಕೊಡುವಂತೆ ಅಧಿಕಾರಿಗಳಿಗೆ ಲಂಚ ಕೊಡಲು ಯತ್ನಿಸುವ ಭ್ರಷ್ಟ ಯುವಕರು—ಇವರೆಲ್ಲ ಈ ಯೋಜನೆಯ ದಾರಿಯ 'ಮೈಲಿಗಲ್ಲು'ಗಳಾಗಿರುವುದು ಎದ್ದು ಕಾಣುತ್ತದೆ. ಇಂಥ ಬನ್ನೆಲೆಯಲ್ಲಿ ಕೆಲವು ಕಡೆ ಬ್ಯಾಂಕ್ ಸಿಬ್ಬಂದಿ ಮಾತ್ರ ಅಷ್ಟಿಷ್ಟು ಮನುಷ್ಯತ್ವ ತೋರಿಸಿದ್ದು ಕಂಡು ಬರುತ್ತದೆ. ಉಳಿದವರೆಲ್ಲ ಇಲ್ಲಿ ಮಧ್ಯದಲ್ಲಿ ತಮ್ಮ ಹೀನ ಉದ್ದೇಶ ಈಡೇರಿಸಿಕೊಂಡರು. ಅಥವಾ ಒಳ್ಳೆಯದು ಏನೂ ಮಾಡದಾದರು ಎಂಬುದೂ ಕಾಣುತ್ತಿದೆ. ಅದೆಲ್ಲ ಇರಲಿ.

### ಕೆಲವು ಅಭಿಪ್ರಾಯಗಳು

ದುರ್ಬಲ ವರ್ಗಕ್ಕೆ ಸೇರಿದವರು, ದುರ್ಬಲರು ಕುಡಿದು ಹಾಳುಮಾಡುವ ಬಗ್ಗೆ ಏನೇ ಹೇಳಲಿ, ಎಲ್ಲ ಬಡವರೂ ಎಮ್ಮೆಗಳನ್ನು ಚೆನ್ನಾಗಿಯೇ ಸಾಕಿಟ್ಟುಕೊಂಡಿದ್ದಾರೆ ಎಂಬ ಬಗ್ಗೆ ಹೆಚ್ಚು ಭಿನ್ನಾಭಿಪ್ರಾಯವಿಲ್ಲ. ಎಮ್ಮೆಗಳಿಗೆ ಈ ಪರಿಸರ ತೀರ ಅಪರಿಚಿತ ಹಾಗೂ ಹೊಸತಾದ್ದರಿಂದ, ತರುವಾಗ ಹೊತ್ತಿಗೆ ನಾಲ್ಕೈದು ಲೀಟರ್ ಕರೆದದ್ದು ನೋಡಿಯೇ ತಂದರೂ ಇಲ್ಲಿ ಅವು ಅಷ್ಟೆಲ್ಲ ಕರೆಯುವುದಿಲ್ಲ. ಜೊತೆಗೆ ತುಂಬ ಎಳೆ ವಯಸ್ಸಿನವು; ಎಂಥೆಂಥವೋ ಎಮ್ಮೆಗಳನ್ನೆಲ್ಲ ಕೊಂಡಿದ್ದಾರೆ—ಸರಿಯಾಗಿ ಆರಿಸಲು ಗೊತ್ತಿಲ್ಲದೆ ಎಂಬುದು ಎಮ್ಮೆ ಕೊಂಡವರ ವಾದ.

ಈ ಎಮ್ಮೆಗಳಿಗೆ ಅವುಗಳ ಕರಾವಿಗೆ ತಕ್ಕುದಕ್ಕಿಂತ ಹೆಚ್ಚಿಗೆ ತೆತ್ತಿದ್ದಾರೆ; ಅವು ಸರಿಯಾಗಿ ಹಾಲು ಕೊಡಲಿಲ್ಲ; ಅವಕ್ಕೆ ಪಶು ಆಹಾರ, ಹಸಿಹುಲ್ಲು ಪೂರೈಸಲಿಲ್ಲ; ಹಾಲಿನ ಸಂಗ್ರಹಣೆ ವ್ಯವಸ್ಥೆ (ಹಾಗೂ ಚಿಲ್ಲಿಂಗ್ ಪ್ಲಾಂಟ್) ತಡವಾಯಿತು. ಹಿಂಡಿ ಕೊಡಲಾಗದಿದ್ದರೆ ಒಣ ಹುಲ್ಲನ್ನಾದರೂ ಕೊಡಬಹುದಿತ್ತು. ಇದರಿಂದ ಸಾಲಗಾರರಿಗೆ ಸ್ವಲ್ಪವಾದರೂ ಹೊರೆ ಕಮ್ಮಿಯಾಗುತ್ತಿತ್ತು — ಎಂಬುದು ಸ್ಥಳೀಯ ಕಾಂಗ್ರೆಸ್ಸೇತರ ಮುಖಂಡರೊಬ್ಬರ ಅನಿಸಿಕೆ. "ಆದರೆ ಈ ಜನರೂ ಸರಿಯಾಗಿ ಮುತುವರ್ಜಿ ವಹಿಸಿ, ಸಿಕ್ಕಿದಷ್ಟು ಹಾಲನ್ನಾದರೂ ನ್ಯಾಯವಾಗಿ ಮಾರಿ ಬ್ಯಾಂಕಿಗೆ ಅಷ್ಟಿಷ್ಟು ಕಟ್ಟಲಿಲ್ಲ. ಇದನ್ನು ಅವರು ಸಾಲವೆಂದು ತಿಳಿಯಲೇ ಇಲ್ಲ. ಸರ್ಕಾರ ಪುಕ್ಕಟೆ ಕೊಟ್ಟದ್ದು, ಮನ್ನಾ ಆಗುತ್ತದೆ ಎಂಬ ಅಂದಾಜು ಅವರದಾಗಿತ್ತು. ಸ್ಥಳೀಯ ಮುಖಂಡರೂ ಇದೇ ಅರ್ಥ ಬರುವಂತೆ ಪ್ರಚಾರ ನಡೆಸಿದರು" ಎನ್ನುತ್ತಾರೆ ಅವರು.

ಆದರೆ ಸ್ಥಳೀಯ ಕಾಂಗ್ರೆಸ್ ಮುಖಂಡರೊಬ್ಬರ ಅಭಿಪ್ರಾಯ ಹೆಚ್ಚು ಅರ್ಥಪೂರ್ಣ ಮತ್ತು ಗಮನಾರ್ಹವಾಗಿದೆ. ಅವರ ಪ್ರಕಾರ, "ಈ ಯೋಜನೆಗಳ ಅನುಷ್ಠಾನದಲ್ಲಿ ಸ್ಥಳೀಯ ಮುಖಂಡರ ಪಾತ್ರ ಏನೇನೂ ಇಲ್ಲ. ಯಾವುದೇ ಸಂದರ್ಭದಲ್ಲೂ ಸ್ಥಳೀಯ ಗ್ರಾಮ ಪಂಚಾಯ್ತಿಯ ಸಲಹೆ ಕೇಳುವುದಾಗಲಿ, ಗ್ರಾಮದಲ್ಲಿ ನಡೆಸಿದ ಕಾರ್ಯಕ್ರಮದ ವಿವರ ಅದಕ್ಕೆ ತಿಳಿಸುವುದಾಗಲಿ ಇಲ್ಲ. ಜನ ನಮ್ಮ ಸಲಹೆ ಅಥವಾ ಮಾರ್ಗದರ್ಶನ ಕೇಳಲು ಬರುವುದರಿಂದ ನಾವಾಗಿಯೇ ಕೆಲವೊಮ್ಮೆ ಅದರಲ್ಲಿ ಮೂಗು ತೂರಿಸಿ ಹಾಕಬೇಕಾಗುತ್ತದೆ, ಅಷ್ಟೆ. **ಗ್ರಾಮಾಭಿವೃದ್ಧಿಯ ಹೆಸರಲ್ಲಿ ನಡೆಯುತ್ತಿರುವ ಎಲ್ಲ ಕಾರ್ಯಕ್ರಮಗಳೂ ಸ್ಥಳೀಯರ ಜೊತೆ ವಿಚಾರ ವಿನಿಮಯವಿಲ್ಲದೆ, ಸ್ಥಳೀಯರಿಗೆ ಸರಿಯಾದ ಅಧಿಕೃತ ಮಾಹಿತಿಯೂ ಇಲ್ಲದೆ ಮೇಲಿಂದ ಮೇಲೆ ನಡೆದುಹೋಗುತ್ತಿವೆ.**"

'ಹಾಗಾದರೆ ಈ ಯೋಜನೆಗಳಿಂದ ಬಡವರ ಉದ್ಧಾರವಾದ ಬಗ್ಗೆ ವೇದಿಕೆಗಳಲ್ಲಿ ಭಾಷಣ ಮಾಡಿದಿರಲ್ಲ?' ಎಂದರೆ, "ಹೌದು, ನಮ್ಮ ಗ್ರಾಮಗಳಲ್ಲೇ ಸಾಲ ಕೊಡುವುದು, ಎಮ್ಮೆ ವಗೈರೆ ತರುವುದು ಎಲ್ಲ ನೋಡುತ್ತಿದ್ದೆವಲ್ಲ. ಸರ್ಕಾರದ ಅಂಕಿ–ಅಂಶಗಳೂ ಇರುತ್ತಿದ್ದವು. ನಿಜವಾಗಿಯೂ ಅಭಿವೃದ್ಧಿ ಆಗುತ್ತಿದೆ ಎಂದು ಹೆಮ್ಮೆಯಿಂದ ಹೇಳಿಕೊಂಡೆವು" ಎನ್ನುತ್ತಾರೆ ಅವರು. ಹೀಗೆ, ಅಂಕಿ–ಅಂಶಗಳಿಂದಾಚೆಗೆ, ಯೋಜನೆಯ ನಿಜವಾದ ಪ್ರಯೋಜನ, ಸಫಲತೆಗಳ ಬಗ್ಗೆ ಸರ್ಕಾರದ ಅಂಗಗಳು ತಳೆದ ನಿರುತ್ಸಾಹದಲ್ಲಿ ಇವರೂ ಭಾಗಿ ಅನ್ನಿಸುತ್ತದೆ.

ಇನ್ನೊಬ್ಬರ ಅಭಿಪ್ರಾಯದಲ್ಲಿ 'ಎಮ್ಮೆ ಸಾಕಣೆ ಯೋಜನೆ ಈ ಭಾಗಕ್ಕೆ ನಿಷ್ಪ್ರಯೋಜಕ. ಏಕೆಂದರೆ ಇಲ್ಲಿನ ಪರಿಸ್ಥಿತಿಯಲ್ಲಿ ಈ ಬಡಜನ ಕೂಲಿಯನ್ನೂ ಮಾಡಿಕೊಂಡು ಜಾನುವಾರು ಸಾಕಿ ದಿನಕ್ಕೆ ೩–೪ ಲೀಟರಿಗಿಂತ ಹೆಚ್ಚು ಹಾಲು ಪಡೆಯುವುದು ಸಾಧ್ಯವಿಲ್ಲ. ಅದಕ್ಕೆ ಸರ್ಕಾರ ಕೊಡುವ ೨.೮೦ ದರ ಅವುಗಳ ಸಾಕಣೆಯ ಖರ್ಚಿಗೇ ಬೇಕು.' ಆದರೆ ಹಿಂದೆ ಹೇಳಿದಂತೆ ದಿನಕ್ಕೆ ೮ ಲೀಟರ್‌ವರೆಗೂ ಪಡೆದವರಿದ್ದಾರೆ. ಖಾಸಗಿಯವರೊಬ್ಬರು ಒಂದು ಹೊತ್ತಿಗೆ ೧೨ ಲೀಟರ್‌ವರೆಗೂ ಪಡೆಯುತ್ತಿದ್ದಾರಂತೆ. ಹೋಗಲಿ, ಈ ಬಡವರನ್ನು ಬಡತನದ ರೇಖೆಯ ತಳದಿಂದ ಯಾವ

(೫ನೇ ಪುಟಕ್ಕೆ)




## ಡಾ|| ವಿ. ಪರಮೇಶ್ವರ,

ಎಂಬಿಬಿಎಸ್, ಎಂಆರ್‌ಸಿಪಿ (ಲಂಡನ್), ಎಫ್‌ಎಸಿಸಿ, ಎಫ್‌ಸಿಸಿಪಿ, ಎಫ್‌ಐಸಿಎ, ಎಫ್‌ಐಎಸ್‌ಇ, ಎಫ್‌ಎಐಡಿ, ಎಫ್‌ಐಎಂಎಸ್‌ಎ, ಎಫ್‌ಐಎಎಂಎಸ್.

ಶೃಂಗೇರಿಯ "ಶಾರದಾ ಧನ್ವಂತರೀ ಆಸ್ಪತ್ರೆ"ಯ ಅಧ್ಯಕ್ಷರೂ ಮತ್ತು ದೇಶದಲ್ಲಿಯೇ ಸುಪ್ರಸಿದ್ಧ ಹೃದಯರೋಗ ತಜ್ಞರೂ ಆಗಿರುವ ಡಾ. ವಿ. ಪರಮೇಶ್ವರ ಇವರ ಹೆಸರು ಜಗತ್ತಿನ ಅತಿ ಮುಖ್ಯ ವ್ಯಕ್ತಿಗಳ ಪರಿಚಯ ಮಾಡಿಕೊಡುವ, ಅಮೆರಿಕೆಯಲ್ಲಿ ಪ್ರಕಟವಾಗುವ ಮಾರ್ಕ್ವಿಸ್‌ರ 'ಹೂ ಈಸ್ ಹೂ ಇನ್ ದಿ ವರ್ಲ್ಡ್'ನ ಆರನೆಯ ಪ್ರಕಟಣೆಯಲ್ಲಿ (೧೯೮೨–೮೩) ಪ್ರಕಟವಾಗಿದೆ. ಇವರು ವೈದ್ಯಕೀಯ ರಂಗದಲ್ಲಿ ಮಾಡಿರುವ ಸಾಧನೆಯನ್ನು ಗುರುತಿಸಿದ ಅನೇಕ ಅಂತರರಾಷ್ಟ್ರೀಯ ವೈದ್ಯಕೀಯ ಸಂಸ್ಥೆಗಳು ಇವರನ್ನು ಈಗಾಗಲೇ ಅವರವರ ಸಂಸ್ಥೆಗಳಲ್ಲಿ ಗೌರವ ಸದಸ್ಯರನ್ನಾಗಿ ತೆಗೆದುಕೊಂಡಿದ್ದಾರೆ. ಈ ವರ್ಷ ಈ ಪ್ರಸಿದ್ಧ ಗ್ರಂಥದಲ್ಲಿಯೂ ಇವರ ಹೆಸರು ಪ್ರಕಟಗೊಂಡಿರುವುದು ಇವರ ಪ್ರಚಂಡ ಸಾಧನೆಯ ದ್ಯೋತಕವಾಗಿದೆ. ಜಗತ್ತಿನ ಅತೀ ಮೇಧಾವಿಗಳು ತಮ್ಮ ಅಮೂಲ್ಯ ಸಾಧನೆಯಿಂದ, ಅಪ್ರತಿಮ ಬುದ್ಧಿಶಕ್ತಿಯಿಂದ ಅಂತರರಾಷ್ಟ್ರೀಯ ಖ್ಯಾತಿಗಳಿಸಿದಾಗ ಮಾತ್ರಾ ಈ ಹೊತ್ತಿಗೆಯಲ್ಲಿ ಅವರ ಹೆಸರು ಬರುವುದು ಸಾಧ್ಯ. ಅಂತಹದರಲ್ಲಿ ಡಾ|| ಪರಮೇಶ್ವರರ ಪರಿಚಯ ಇದರಲ್ಲಿ ಪ್ರಕಟವಾಗಿರುವುದು ಭಾರತಕ್ಕೆ, ವಿಶೇಷವಾಗಿ ಶೃಂಗೇರಿ ಭಾಗದ ನಮಗೆ ಅತ್ಯಂತ ಹೆಮ್ಮೆಯ ವಿಷಯ.

ಡಾ. ಪರಮೇಶ್ವರರವರು ೧೯೩೦ರಲ್ಲಿ ಶೃಂಗೇರಿಗೆ ಸಮೀಪದ ವಿಶ್ವನಾಥಪುರದಲ್ಲಿ ಜನಿಸಿದರು. ೧೯೫೭ರಲ್ಲಿ ಎಂಬಿಬಿಎಸ್ ಪದವೀಧರರಾದರು. ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಅಸಿಸ್ಟೆಂಟ್ ಸರ್ಜನ್‌ರಾಗಿ ಸೇವೆ ಸಲ್ಲಿಸಿದ ಇವರು ಇಂಗ್ಲೆಂಡಿಗೆ ತೆರಳಿ ಅಲ್ಲಿ ಪೂರ್ವ ಬರ್ಮಿಂಗ್‌ಹ್ಯಾಮ್ ಆಸ್ಪತ್ರೆಯಲ್ಲಿ ಸೀನಿಯರ್ ಹೌಸ್ ಆಫೀಸರ್‌ರಾಗಿ ಮತ್ತು ಮೆಡಿಕಲ್ ರಿಜಿಸ್ಟ್ರಾರರಾಗಿ ೧೯೬೨ರಿಂದ ೧೯೬೪ರವರೆಗೆ ಸೇವೆ ಸಲ್ಲಿಸಿದರು. ಅಲ್ಲಿಂದ ತಾಯ್ನಾಡಿಗೆ ಮರಳಿ, ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಕೆಲಸ ಮಾಡಿದರು. ೧೯೭೧ರಿಂದ ಅವರು ಖಾಸಗಿಯಾಗಿ ವೈದ್ಯಕೀಯ ಮತ್ತು ಹೃದಯರೋಗ ತಜ್ಞರಾಗಿ ಕೆಲಸಮಾಡುತ್ತಿದ್ದಾರೆ. ಅವರು ಅನೇಕ ಭಾರತೀಯ ಕಂಪನಿಗಳಿಗೆ ವೈದ್ಯಕೀಯ ಸಲಹಾಗಾರರು ಹಾಗೂ ಜೀವವಿಮಾ ಸಂಸ್ಥೆಗೆ ಮೆಡಿಕಲ್ ರೆಫ್ರೀ ಆಗಿದ್ದಾರೆ. ಶೃಂಗೇರಿಯ ಶಾರದಾ ಧನ್ವಂತರಿ ಆಸ್ಪತ್ರೆ ಮತ್ತು ಶ್ರೀ ಅಭಿನವ ವಿದ್ಯಾತೀರ್ಥ ಸ್ವಾಮಿಗಳ ವಿಜ್ಞಾನ ಸಂಶೋಧನಾ ಅಕಾಡೆಮಿಯ ಅಧ್ಯಕ್ಷರು, ಬೆಂಗಳೂರು ಕ್ಲಿನಿಕಲ್ ರಿಸರ್ಚ್ ಲ್ಯಾಬೋರೇಟರಿಯ ಡೈರೆಕ್ಟರ್, 'ಡಾ. ವಿ. ಪರಮೇಶ್ವರ ಚಾರಿಟಬಲ್ ಟ್ರಸ್ಟ್' ಇದರ ವಿಶ್ವಸ್ಥರೂ ಆಗಿರುವ ಶ್ರೀಯುತರು ಬೆಂಗಳೂರಿನಲ್ಲಿ ಮತ್ತು ಕರ್ನಾಟಕದಲ್ಲಿ ಹಲವೆಡೆ ಅನೇಕ ವೈದ್ಯಕೀಯ ಮತ್ತು ಹೃದಯ ರೋಗ ತಪಾಸಣಾ ಶಿಬಿರಗಳನ್ನು ನಡೆಸಿದ್ದಾರೆ.

ಭಾರತದಲ್ಲೂ ವಿದೇಶಗಳಲ್ಲೂ ಹತ್ತಾರು ವೈದ್ಯಕೀಯ ಸಂಸ್ಥೆಗಳಲ್ಲಿ ವಿವಿಧ ರೀತಿಯ ಸೇವೆ ಸಲ್ಲಿಸುತ್ತಿರುವ ಡಾ|| ಪರಮೇಶ್ವರ, ಹಲವಾರು ವೈದ್ಯಕೀಯ ಗ್ರಂಥಗಳು ಮತ್ತು ಪತ್ರಿಕೆಗಳ ಜೀವನಾಡಿಯಾಗಿ ದುಡಿಯುತ್ತಿದ್ದಾರಲ್ಲದೆ, 'ಮೆಡಿಕಲ್ ಎಮರ್ಜೆನ್ಸೀಸ್ ಇನ್ ಜನರಲ್ ಪ್ರಾಕ್ಟೀಸ್' ಎಂಬ ಉಪಯುಕ್ತ ಪುಸ್ತಕವನ್ನೂ ಬರೆದಿದ್ದಾರೆ.

ಶಂಕರ್ ನಾಗ್ ಸಂಸ್ಥೆಯ ವ... ತಜ್ಞ ಡಾ|| ನೀನಿ ರಾವ್‌ರವರು ಇವರ ಇವರ ಮಕ್ಕಳು. ಇವರ ವಿಳಾಸ — ವ... ಪೂರ್ವ, ಬೆಂಗಳೂರು; ಕಾರ್ಯಾ... ಬೆಂಗಳೂರು.

...ಕರ ಬಳಗದವರಾದ ಖ್ಯಾತ ಸ್ತ್ರೀರೋಗ ... ಆಶೀರ್ವಾದ, ಅಪರ್ಣ ಮತ್ತು ಅಶ್ವಿನ್ ... ವಿಸಿ', ನಂ. ೫೪, ಕುಮಾರ ಕೃಪಾ ... ೪೫; ರೇಸ್ ಕೋರ್ಸ್ ರಸ್ತೆ,

# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿ
## ಎಮ್ಮೆ ಸಾಲ: ಒಂದು ಕರಡು ಸಮೀಕ್ಷೆ

(೪ನೇ ಪುಟದಿಂದ)

...ತಿ ಮೇಲೆತ್ತಲು ಸಾಧ್ಯ ಎಂಬ ಬಗ್ಗೆ ಅವರಿಗೆ ಸ್ಪಷ್ಟ ವಿಚಾರ ಇಲ್ಲ.

**ಸಮಸ್ಯೆಗಳ ಇನ್ನೊಂದು ಮುಖ**

ಸಾಲಗಾರ ಬಡವರು ಹೇಳಿಕೊಳ್ಳುವ ಸಮಸ್ಯೆಗಳ ಬಗ್ಗೆ ಸರ್ಕಾರಿ ಮತ್ತು ಬ್ಯಾಂಕ್ ಅಧಿಕಾರಿಗಳ ಅಭಿಪ್ರಾಯ ಪರಿಶೀಲಿಸೋಣ.

ಸ್ಥಳೀಯ ಎಮ್ಮೆಗಳನ್ನು ಕೊಳ್ಳುವುದಕ್ಕೆ ಮೊದಲಿಗೆ ಅವಕಾಶ ಕೊಡಲಾಗಿತ್ತು. ಆದರೆ ತಂದೆ ಮಗನಿಗೆ, ಮಗ ತಂದೆಗೆ ಎಮ್ಮೆ ಮಾರಿದಂತೆ, ಶ್ರೀಮಂತ ತನ್ನ ಆಳಿಗೆ ಎಮ್ಮೆ ಮಾರಿದಂತೆ, ಮುಂತಾಗಿ ಸುಳ್ಳು ದಾಖಲೆ ಒದಗಿಸಿ ಹಣದ ದುರುಪಯೋಗ ಹೆಚ್ಚಿದ್ದರಿಂದ, ಬಿಡಿಒ, ಬ್ಯಾಂಕ್ ಪ್ರತಿನಿಧಿ, ಪಶುವೈದ್ಯರು ಇರುವ ಸಮಿತಿ, ಸಾಲಗಾರ (ಪ್ರಯೋಜನದಾರ) ಆಯ್ಕೆ ಮಾಡುವ ಎಮ್ಮೆಯ 'ಯೋಗ್ಯತೆ'ಯನ್ನು ಅಳೆದು ನಿಗದಿ ಮಾಡಿದ ಹಣವನ್ನು ಬ್ಯಾಂಕ್ ಡ್ರಾಫ್ಟ್ ಮೂಲಕ ಕೊಡುವ ಪದ್ಧತಿ ಅಳವಡಿಸಲಾಯಿತು. ಆದ್ದರಿಂದ ದಾವಣಗೆರೆಯಿಂದ ಉತ್ತಮ ಜಾತಿಯ ಎಮ್ಮೆಗಳನ್ನು ತರಿಸುವುದು ಅನಿವಾರ್ಯವಾಯಿತು. ಸಾಲಗಾರನಿಗೆ ಒಪ್ಪಿಗೆಯಾಗದೆ ಇಂಥದೇ ಎಮ್ಮೆಯನ್ನು ತೆಗೆದುಕೊಳ್ಳಬೇಕೆಂದು ಯಾವಾಗಲೂ ಬಲವಂತ ಪಡಿಸಲಿಲ್ಲ. ಆದರೂ ಬಡವರ ವಿಶಿಷ್ಟ ರೀತಿಯ ದಾಕ್ಷಿಣ್ಯ ("ಇಲ್ಲಿಯವರೆಗೆ ಬಂದು ಯಾವ ಎಮ್ಮೆಯನ್ನೂ ಆರಿಸದೆ ಹೋದರೆ ಏನೆನ್ನುತ್ತಾರೋ!"), ಭಯ ಇವುಗಳಿಂದಾಗಿ ಕಳಪೆ ಎಮ್ಮೆಗಳು ಸಿಕ್ಕಿರಲೂಬಹುದು. ಇದಕ್ಕೆ ತಾವು ಏನೂ ಮಾಡುವಂತಿಲ್ಲ ಎಂಬುದು ಅಧಿಕಾರ ವರ್ಗದ ಹೇಳಿಕೆ. ಅಲ್ಲದೆ ಈ ಯೋಜನೆ ಇಡೀ ದೇಶದಲ್ಲಿ ಜಾರಿಗೆ ಬಂದಿದ್ದು, ಎಮ್ಮೆ ವ್ಯಾಪಾರಿಗಳು ಸಂದರ್ಭದ ದುರ್ಲಾಭ ಪಡೆದಿರಲು ಸಾಧ್ಯ ಎನ್ನುತ್ತಾರೆ.

ಆದರೆ ಈ ಹಂತದಲ್ಲೇ ಹಲವಾರು ಕಡೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಭ್ರಷ್ಟಾಚಾರ ನಡೆದಿರುವ ಆರೋಪಗಳು ಹೇರಳವಾಗಿವೆ. ಇದರಲ್ಲಿ ಅಧಿಕಾರ ವರ್ಗದವರು ಮಾತ್ರ ಸೇರುತ್ತಾರೆಂದಲ್ಲ. ಕೆಲವೊಮ್ಮೆ ಸ್ಥಳೀಯ ಮುಖಂಡರು, ಕೆಲವು ಶ್ರೀಮಂತರು, ಇನ್ನು ಕೆಲವು ಸಂದರ್ಭಗಳಲ್ಲಿ, ಸಾಕಷ್ಟು ಅನುಕೂಲಸ್ಥರಾಗಿದ್ದೂ ಪ್ರಯೋಜನದಾರರ ಪಟ್ಟಿಯಲ್ಲಿ ಸೇರಿಕೊಂಡಿರುವವರು — ಇವರುಗಳೂ ಸೇರಬಹುದು.

**ಕೆಲವು ಸಮಸ್ಯೆಗಳಿಗೆ ಕಾರಣಗಳು**

ಸರ್ಕಾರಿ ಸ್ವಾಮ್ಯಕ್ಕೊಳಪಡದ ಸ್ವತಂತ್ರ ಸಂಸ್ಥೆಯಾದ ಕೆಡಿಡಿಸಿ ತನ್ನ ಕೆಲಸದಲ್ಲಿ ವಿಫಲವಾದದ್ದು ಬಡವರ ಎಲ್ಲ ಸಮಸ್ಯೆಗಳಿಗೆ ಮೂಲ ಕಾರಣವಾಗಿ ಕಾಣಬರುತ್ತದೆ. ಆದರೆ ಸಾಧ್ಯವಾದಷ್ಟು ಸಮಸ್ಯೆಯನ್ನು ಹಗುರ ಮಾಡುವಯತ್ನಕ್ಕೂ ಹಲವು ಅಡಚಣೆಗಳಿವೆ. ಅದರಲ್ಲಿ ಪಶುವೈದ್ಯರ ಕೊರತೆ ಮೊದಲಿನದು. ಇಡೀ ತಾ||ಗೆ ಮೂವರು ಮಾತ್ರ ಪಶುವೈದ್ಯಕೀಯ ತಜ್ಞರಿದ್ದಾರೆ. (ಅದರಲ್ಲೂ ಒಬ್ಬರು ಮಿಶ್ರತಳಿ ಹಸುಗಳಿಗಾಗಿ, ಇನ್ನೊಬ್ಬರು ಕೊಪ್ಪ ಪಶುವೈದ್ಯ ಆಸ್ಪತ್ರೆಗಾಗಿ ಇರುವವರು.) ಹೆಚ್ಚು ಜನ ವೈದ್ಯರಾದರೂ ಇದ್ದಿದ್ದಲ್ಲಿ ಕೆಡಿಡಿಸಿ ಸೋತರೂ ಇವರಿಂದಲೇ ಅಷ್ಟಿಷ್ಟು ಸೇವೆ ಪಡೆಯುವುದು ಅಧಿಕಾರಿಗಳಿಗೆ ಸಾಧ್ಯವಿತ್ತು.

ಬಡತನದ ರೇಖೆಯ ಅರ್ಥವಿವರಣೆ, ಕುಟುಂಬದ ಆದಾಯ ಲೆಕ್ಕ ಹಾಕುವ ಕ್ರಮ ಮುಂತಾದುವುಗಳಿಂದ ಕೆಲವು ನ್ಯಾಯವಾದ ಬಡವರ ಆದಾಯ ವಾರ್ಷಿಕ ೩ ಸಾವಿರ ಮಿತಿಯನ್ನು ಅಥವಾ ಬಡತನದ ರೇಖೆಯ ಮಿತಿಯನ್ನು ಮೀರುತ್ತದೆ. ಉದಾಹರಣೆಗೆ ಮೂರು ಹೊತ್ತೂ ಒಂದೊಂದು ಗರಟೆ ಗಂಜಿ ಕುಡಿದೇ ಒಬ್ಬ ಬದುಕಿದ್ದರೆ ಆ ಗಂಜಿಯ ಖರ್ಚು ಲೆಕ್ಕ ಹಾಕಿದರೂ ತಿಂಗಳಿಗೆ ೭೦೦ ರೂ. (ಬಡತನದ ರೇಖೆ)ಗಿಂತ ಹೆಚ್ಚಾಗಬಹುದು. ಆದ್ದರಿಂದಲೇ ಈ ವರ್ಷ ಯೋಜನೆಯ ಕೆಲಸದ ಆರಂಭಕ್ಕೆ ಮೊದಲು ಸಮೀಕ್ಷೆ ನಡೆಸಲು ತರಬೇತಿ ಕೊಡುತ್ತಾ, ಯೋಜನಾಧಿಕಾರಿ ಟಿ. ವೈ. ನಯಾಜ್ ಅಹಮದ್ ಹೇಳಿದ್ದರು—"ಸಮೀಕ್ಷೆ ಆದಷ್ಟೂ ಕರಾರುವಾಕ್ಕಾಗಿರಬೇಕಾದರೂ ಅಂತಿಮವಾಗಿ ಒಣ ಲೆಕ್ಕಾಚಾರಗಳಿಗಿಂತ ದೇವರ ನ್ಯಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಸಮೀಕ್ಷೆ ನಡೆಸಿ" ಎಂದು. ಆದರೆ ಮೇಲೆ ಹೇಳಿದಂಥ ವಿಪರ್ಯಾಸ ಕೆಲವೆಡೆ ನಡೆದಿದ್ದರೆ, ಸರ್ಕಾರಕ್ಕೆ ಸುಳ್ಳು ಲೆಕ್ಕ ಒಪ್ಪಿಸಬಲ್ಲ ಕೆಲವು ಅನುಕೂಲಸ್ಥರೇ ವಾರ್ಷಿಕ ೧,೫೦೦ ರೂ.ಗಿಂತ ಕಡಿಮೆ ಕಾಣಿಸಿಕೊಂಡಿದ್ದಾರೆ. ಹೀಗೆ ಮಿತಿಯಿಂದ ಹೊರಗುಳಿಯುವ ಬಡವರಿಗೆ ಸಾಲದ ಮೇಲೆ ಶೇ. ೪ಕ್ಕೆ ಬದಲು ಶೇ. ೧೦.೨೫ ದರದಲ್ಲಿ ವಿಪರೀತ ಬಡ್ಡಿ ಬೀಳುತ್ತದೆ. ತಹಸೀಲ್ದಾರರು ಮತ್ತು ಅವರ ಸಿಬ್ಬಂದಿ ಇಂಥ ಪ್ರಕರಣಗಳನ್ನು ಮರು ವಿಮರ್ಶಿಸಿ, 'ದೇವರ ನ್ಯಾಯ'ವನ್ನು ಈಗಲೂ ನೆರವೇರಿಸಬಹುದು.

ಸಾಲ ಪಡೆದ ಬಡವರು ತೀರಿಸುವ ಮನಸ್ಸನ್ನು ಸ್ವಲ್ಪವಾದರೂ ತೋರ್ಪಡಿಸಿದರೆ ತಾವೂ ಅವರ ಕಷ್ಟ ಅರಿತು ಬಹಳಷ್ಟು ಹೊಂದಾಣಿಕೆ ಮಾಡಿಕೊಡಲು ತಯಾರಿರುವುದಾಗಿ ಬ್ಯಾಂಕಿನವರು ಹೇಳುತ್ತಾರೆ.

**ಎಲ್ಲಕ್ಕಿಂತ ಮುಖ್ಯವಾಗಿ**

ಈ ಇಡೀ ಸಮಸ್ಯೆಯಲ್ಲಿ ಎಲ್ಲಕ್ಕಿಂತ ಮುಖ್ಯವಾದ ಅಂಶವೆಂದರೆ ಸಾಲ ಪಡೆದ ಬಡವರಿಗೇ ಅದರಿಂದ ಅತೀ ಹೆಚ್ಚು ಪ್ರಯೋಜನ ಹೇಗೆ ಪಡೆಯಬಹುದೆಂಬ ಬಗ್ಗೆ ಮುತುವರ್ಜಿ ಇಲ್ಲದಿರುವುದು. ಹಿಂದೆ ಹೇಳಿದ ಬ್ರಾಹ್ಮಣ ಕುಟುಂಬ (ಉತ್ತಮವಾಗಿ ಹಾಲು ಸಂಪಾದಿಸಿದವರು) ಕೂಡ ಶ್ರೀಮಂತರೇನಲ್ಲ. ಆದರೆ ಅವರು ಸರ್ಕಾರದ ಸಹಾಯದ ಜೊತೆಗೆ ತಮ್ಮ ಬುದ್ಧಿಶಕ್ತಿ, ತೀವ್ರ ಪ್ರಯತ್ನಗಳನ್ನೂ ಬೆರೆಸಿ, ಇಷ್ಟದಲ್ಲಿ ಉತ್ತಮ ಫಲ ಪಡೆಯುತ್ತಿದ್ದಾರೆ. ಇನ್ನು ೩-೪ ವರ್ಷಗಳಲ್ಲಾದರೂ ಅವರ ಜೀವನಮಟ್ಟ ಸುಧಾರಣೆಯಾಗುವ ಸಾಧ್ಯತೆ ಇದೆ. ಆದರೆ ಇತರ ಹಿಂದುಳಿದ ಜನರಲ್ಲಿ ಆ ಮಟ್ಟದ ಒಂದು ಉದ್ದೇಶಪರತೆ ಕಾಣುವುದಿಲ್ಲ. ಉದಾಹರಣೆಗೆ, ಕಲ್ಲು ಚಪ್ಪಡಿಗಳನ್ನು ಸಾಲಗಾರರ ಮನೆಗೆ ಹತ್ತಿರದ ಗಾಡಿ ರಸ್ತೆಯವರೆಗೆ ಸರಬರಾಜು ಮಾಡಿದ್ದು, ಅಲ್ಲಿಂದ ಅದನ್ನು ಅವರು ತಲೆಹೊರೆಯಲ್ಲಿ ಮನೆಗೆ ಸಾಗಿಸಬೇಕಿತ್ತು. ಆದರೆ ಎಷ್ಟೋ ಜನ ಕಲ್ಲುಗಳನ್ನು ಅಲ್ಲೇ ಬಿಟ್ಟಿದ್ದಾರೆ. "ಅಲ್ಲಿ ತಂದು ಹಾಕಿದರೆ ಅದನ್ನು ಮನೆಗೆ ಸಾಗಿಸುವವರ್ಯಾರು?" ಎಂದು ಅಧಿಕಾರಿಗಳನ್ನೇ ದೂರುತ್ತಾರೆ. ಸಿಕ್ಕಿದಷ್ಟು ಹಾಲನ್ನಾದರೂ ಕ್ರಮವರಿತು ಮಾರಿ ಸ್ವಲ್ಪವಾದರೂ ಸಂಪಾದನೆಯಾಗುವಂತೆ ವ್ಯವಸ್ಥೆ ಮಾಡಿಕೊಳ್ಳೋಣವೆಂಬ ಹುಮ್ಮಸ್ಸಿಲ್ಲ. ತಮ್ಮ ಶ್ರೇಯಸ್ಸಿಗೆ ತಾವೇ ಉಪಾಯ ಹುಡುಕಿಕೊಳ್ಳಬೇಕೆಂಬ ಸ್ವಾವಲಂಬನೆಯ ಮನೋಭಾವ ಇಲ್ಲ.

ಸುತ್ತಲಿನ ಸಮಾಜವಾದರೂ ಈ ಜಡತ್ವವನ್ನೇ ಪೋಷಿಸುತ್ತ, "ಇದರಿಂದೆಲ್ಲ ಏನು ಉಪಯೋಗ?" ಎಂಬ ತಾತ್ಸಾರ ಭಾವನೆಯನ್ನು ತಾನೂ ಬೆಳೆಸಿಕೊಂಡು ಅವರಲ್ಲೂ ಬೆಳೆಸುತ್ತ, ಈ ಯೋಜನೆ ಇನ್ನಷ್ಟು ಪ್ರತಿಕೂಲ ವಾಗುವಂತೆ ಮಾಡುತ್ತಿದೆಯೆನ್ನಿಸುತ್ತದೆ.

ಅಂದರೆ ಸವಲತ್ತು ಕೊಡುವುದರ ಜೊತೆಗೆ ಅದನ್ನು ಸದುಪಯೋಗ ಪಡಿಸಿಕೊಳ್ಳಬೇಕೆಂಬ ಉತ್ಸಾಹ, ಪ್ರೇರಣೆಗಳನ್ನೂ ಪ್ರಯೋಜನದಾರರ ಮನಸ್ಸಿನಲ್ಲಿ ತುಂಬಿದರೆ ಮಾತ್ರ ಸ್ವಲ್ಪವಾದರೂ ಪ್ರಯೋಜನವಾದೀತು. ಆದರೆ ಅದನ್ನು ಯಾರು ಮಾಡಬೇಕು? ಯೋಜನೆಯ ಆದೇಶ ಈ ಜವಾಬ್ದಾರಿಯನ್ನು ಯಾರಿಗೂ ವಹಿಸಿಲ್ಲವಲ್ಲ!

**ದಿಕ್ಕೇ ಬೇರೆ**

ಅಂದು ಬಿಡಿಒರವರನ್ನು ಕಾದಿದ್ದವರಲ್ಲಿ ಒಬ್ಬ ಯುವಕ ಕೂಲಿಗಾರ ಹೇಳಿದ — ನೋಡಿ ಸ್ವಾಮಿ, ಈ ಸಾಲ-ಸೋಲ, ಎಮ್ಮೆ-ಕುರಿಗಳಿಂದೆಲ್ಲ ನಮ್ಮ ಉದ್ಧಾರ ಆಗುವುದಿಲ್ಲ. ನಾವು ಪಳಗಿರುವುದು ಕೃಷಿಯಲ್ಲಿ, ಕೂಲಿ ಮಾಡುತ್ತಿರುವುದೂ ಅಲ್ಲೇ. ಸಾಧ್ಯವಿದ್ದರೆ ನಮಗೆಲ್ಲ ಎರಡೆರಡು ಎಕರೆ ಸಾಗುವಳಿ ಯೋಗ್ಯವಾದ ಜಮೀನು ಕೊಡಿರಿ. ಈ ನಿಮ್ಮ ಯಾವ ಯೋಜನೆಗಳೂ ಇಲ್ಲದೆ ನಾವು ನಮ್ಮ ನಮ್ಮ ಕಾಲ ಮೇಲೆ ನಿಲ್ಲುತ್ತೇವೆ."

ಬಡವರ ಈ ಸಲಹೆಯನ್ನು ಒಪ್ಪಲು ಎಷ್ಟು ಜನ ಯೋಜನಾ ತಜ್ಞರು, ಸರ್ಕಾರಿ ಮುಂದಾಳುಗಳು ತಯಾರಿದ್ದಾರೆ? ಹಾಗೆ ಒಪ್ಪಿದರೆ ಕೂಡಲೇ ಒತ್ತುವರಿಗಳು, ಅಸ್ತಿ ಮಿತಿಗಿಂತ ಹೆಚ್ಚಿರುವ ಜಮೀನುಗಳು —ಎಲ್ಲವನ್ನೂ ವಶಪಡಿಸಿಕೊಳ್ಳಬೇಕಾದೀತು; ಯಾಕೆಂದರೆ ಈಗಾಗಲೇ ಆಸ್ತಿ ಹೊಂದಿರುವವರು ಒಳಗೆ ಹಾಕಿಕೊಳ್ಳದಿರುವ ಸಾಗುವಳಿ ಯೋಗ್ಯ ಭೂಮಿ ಬಹುಶಃ ನಮ್ಮ ದೇಶದಲ್ಲೇ ಎಲ್ಲೂ ಸಿಗಲಿಕ್ಕಿಲ್ಲ!

ಹೀಗೆ, ದುರ್ಬಲರನ್ನು ಮೇಲೆತ್ತುವ ದಿಕ್ಕೇ ಬೇರೆ ಇರುವಾಗ, ಇಂಥ ಯೋಜನೆಗಳನ್ನು ಅನುಷ್ಠಾನ ಗೊಳಿಸಿ ಜನರ ಏಳಿಗೆಯನ್ನು "ಮಾಡಿ ತೋರಿಸಬೇಕಾಗಿರುವ" ಸರ್ಕಾರ-ಬ್ಯಾಂಕ್ ಮುಂತಾದ ನೌಕರರಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು, ಹಾಗೇ ಅಲ್ಲಲ್ಲಿ ಒಬ್ಬೊಬ್ಬರು ಯುವ ಜನರು "ಈ ಯೋಜನೆಯಿಂದ ಯಾವ ರೀತಿ ಬಡವರಿಗೆ ಒಳ್ಳೆಯದು ಮಾಡಬಹುದು, ಏನು ಮಾಡಿದರೆ ಅವರ ಏಳ್ಗೆಯಾದೀತು" ಎಂದು ಚಡಪಡಿಸುತ್ತಾರೆ. ಅವರ ಈ ಪ್ರಾಮಾಣಿಕ ಚಡಪಡಿಕೆಗೆ ಉತ್ತರ ಹುಡುಕುವ ಜೈತನ್ಯ, ಸತ್ವ ನಮ್ಮ ಸಮಾಜಕ್ಕೆ ಇದೆಯೆ?

---

## ಓದುಗರ ಪತ್ರ

### ತಳ್ಳಿ ಅರ್ಜಿಗಳು: ಒಂದು ಪ್ರತಿಕ್ರಿಯೆ

ಮಾನ್ಯರೆ,

ತಮ್ಮ ಪತ್ರಿಕೆಯ ೬-೩-೮೩ರ ಸಂಚಿಕೆಯಲ್ಲಿ "ತಳ್ಳಿ ಅರ್ಜಿಗಳು" ಎಂಬ ಶಿರೋನಾಮೆಯಡಿಯಲ್ಲಿ ಕಲ್ಲುಗುಡ್ಡೆಯ ಡಿ.ವೈ. ರಾಮಚಂದ್ರ ಎಂಬುವವರು ಸರ್ಕಾರಿ ಅಧಿಕಾರಿಗಳನ್ನು ಆಕ್ಷೇಪಿಸಿ ಬರೆದಿರುವ ಪತ್ರ ಪ್ರಕಟವಾಗಿದೆಯಷ್ಟೆ. ಅವರು ಹೇಳಿರುವಂತೆ ಸ್ವತಃ ಸರ್ಕಾರಿ ಅಧಿಕಾರಿಗಳಿಂದ ತೊಂದರೆ ಅನುಭವಿಸಿದ್ದಲ್ಲಿ ನಿರ್ದಿಷ್ಟವಾದ ಹೇಳಿಕೆ ಕೊಡುವುದನ್ನು ಬಿಟ್ಟು ಸರ್ಕಾರಿ ಅಧಿಕಾರಿಗಳನ್ನು ಮನ ಬಂದಂತೆ ದೂಷಿಸುವುದು ಸರಿಯೆ? ಆ ಬಗ್ಗೆ ಸದ್ರಿಯವರು ಸಮಜಾಯಿಸಿ ನೀಡಲು ಶಕ್ತರೆ? ಅಲ್ಲದೆ ತಾವು ಕೂಡ ಈ ರೀತಿಯ ಪ್ರಕಟಣೆಗಳಿಗೆ ಆಸ್ಪದ ಕೊಡಬಾರದೆಂದು ಕಳಕಳಿಯಿಂದ ವಿನಂತಿಸುತ್ತೇನೆ.

ಒಬ್ಬ ನೊಂದ ಸರ್ಕಾರಿ ನೌಕರ,
**ಹೆಚ್.ಸಿ.ಚಂದ್ರಪ್ಪ.**

[ಸದರಿ ಪತ್ರದಲ್ಲಿ ಹಳ್ಳಿಗಳಲ್ಲಿರುವ ಒಂದು ಅನಿಷ್ಟ ರೀತಿಯನ್ನು ಲೇಖಕರು ಎತ್ತಿ ಹೇಳಿದ್ದಾರೆ. ಅದರಲ್ಲಿ ಸರ್ಕಾರಿ ಅಧಿಕಾರಿಗಳ ಬಗ್ಗೆ ಬರೆದಿರುವ ವಿಷಯ ವಿಷಾದಕಾರಿಯಾದ್ದೇನೂ ಅಲ್ಲವೆನ್ನಿಸುತ್ತದೆ. ತಳ್ಳಿ ಅರ್ಜಿಗಳ ಪರಿಣಾಮ ತನಿಖೆಗೆ ಬಂದ ಅಧಿಕಾರಿಗೆ ಲಂಚ ಕೊಡುವುದರಲ್ಲಿ ಮುಕ್ತಾಯವಾಗುವುದು ಸರ್ವೇ ಸಾಮಾನ್ಯ. ಏಕೆಂದರೆ ಆಪಾದನೆ ಮಾಡಿದವರ ವಿವರ ಇರುವುದಿಲ್ಲ. ತಳ್ಳಿ ಅರ್ಜಿ ಬರೆಯುವುದೂ, ಆಪಾದನೆ ಬಂದಾಗ ಅದನ್ನು ಲಂಚ ವಸೂಲಿಗೆ ಮಾರ್ಗವಾಗಿ ಬಳಸುವುದೂ ಎರಡೂ ನಿಂತಾಗ "ನೋವಾಗು"ವುದೂ ತಪ್ಪೀತು.—ಸಂ.]

---

## ಅಂಕುರ ಬಳಗ

### ಕೊಪ್ಪ

ಬಳಗದ ವತಿಯಿಂದ 3-4-83ನೇ ಭಾನುವಾರ ಕೊಪ್ಪ ಪುರಸಭಾ ಭವನದಲ್ಲಿ ನಾಟಕದ ಅಭಿನಯದ ಬಗ್ಗೆ ಒಂದು ದಿನದ ತರಬೇತಿ ಶಿಬಿರ ನಡೆಸಲಾಗುವುದು. ಉಡುಪಿ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರೂ, ಉತ್ತಮ ನಿರ್ದೇಶಕರೂ, ನಾಟಕಕಾರರೂ ಆಗಿರುವ ಶ್ರೀ ರಾಮದಾಸ್ ಈ ಶಿಬಿರವನ್ನು ನಡೆಸಿಕೊಡುತ್ತಾರೆ. ಭಾಗವಹಿಸಲಿಚ್ಛಿಸುವವರು 30-3-83ರ ಒಳಗಾಗಿ 15 ರೂ. ಶುಲ್ಕದೊಂದಿಗೆ ತಮ್ಮ ಹೆಸರನ್ನು ಶ್ರೀ ಎಸ್.ಎಸ್.ವಿಶ್ವೇಶ್ವರ, ಇತಿಹಾಸ ಉಪನ್ಯಾಸಕರು, ಸರ್ಕಾರಿ ಕಿರಿಯ ಕಾಲೇಜ್, ಕೊಪ್ಪ ಇವರಲ್ಲಿ ಅಥವಾ ಶ್ರೀ ಎಚ್. ಶಂಕರ ರಾವ್, ನೇಸರ ಮುದ್ರಣ, ಕೊಪ್ಪ ಇವರಲ್ಲಿ ಕೊಡಬಹುದು.

## ಆಹ್ವಾನ ವಾಲಿಬಾಲ್ ಪಂದ್ಯಾವಳಿ
# ಭದ್ರಾವತಿ ತಂಡಕ್ಕೆ ಪ್ರಶಸ್ತಿ

ಕೊಪ್ಪ: ಇಲ್ಲಿ ಮಾ. ೧೯ ಮತ್ತು ೨೦ರಂದು ನಡೆದ ಚಿಕ್ಕಮಗಳೂರು, ಶಿವಮೊಗ್ಗ, ದ.ಕನ್ನಡ ಜಿಲ್ಲೆಗಳ ಹೊನಲು ಬೆಳಕಿನ ಆಹ್ವಾನ ವಾಲಿಬಾಲ್ ಪಂದ್ಯಾವಳಿಯ ಪ್ರಥಮ ಪ್ರಶಸ್ತಿ ಭದ್ರಾವತಿಯ ವಿಶ್ವೇಶ್ವರಯ್ಯ ಕಬ್ಬಿಣ – ಉಕ್ಕು ಕಾರ್ಖಾನೆ ತಂಡದ ಪಾಲಾಯಿತು.

ಅಂತಿಮ ಲೀಗ್ ಪಂದ್ಯದಲ್ಲಿ ಈ ತಂಡದ ಕೈಲಿ ೮–೧೫, ೫–೧೫, ೬–೧೫ರಲ್ಲಿ ನೇರ ಪಂದ್ಯಗಳಲ್ಲಿ ಸೋತ ಸಂತೆಬೆನ್ನೂರಿನ ತಂಡ ಎರಡನೇ ಸ್ಥಾನ ಪಡೆಯಿತು.

ಚಿಕ್ಕಮಗಳೂರು ಜಿಲ್ಲೆಯ ಉತ್ತಮ ತಂಡ ಸ್ಪರ್ಧೆಯಲ್ಲಿ ಕಡೂರು ತಂಡ ಚಿಕ್ಕಮಗಳೂರು ತಂಡವನ್ನು ೧೫–೫, ೧೫–೬ರ ನೇರ ಆಟಗಳಲ್ಲಿ ಸೋಲಿಸಿ ಮೊದಲ ಸ್ಥಾನ ಪಡೆಯಿತು.

ಇಲ್ಲಿನ ಲಯನ್ಸ್ ಕ್ಲಬ್, ಆಫೀಸರ್ಸ್ ಕ್ಲಬ್ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಸಂಘದವರು ಜಂಟಿಯಾಗಿ ಏರ್ಪಡಿಸಿದ್ದ ಈ ಪಂದ್ಯಾವಳಿಯನ್ನು ಎ.ಮನೋಹರರಾವ್ ಅವರ ಅಧ್ಯಕ್ಷತೆಯಲ್ಲಿ ಲಯನ್ ಡಾ. ಎಸ್. ಎಂ. ಶಾನಭಾಗ್ ಉದ್ಘಾಟಿಸಿದರು. ಬಿ.ಜಿ. ಚಿದಂಬರ್ ಮುಖ್ಯ ಅತಿಥಿಗಳಾಗಿದ್ದರು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಹೆಚ್.ಬಿ.ರಾಜಗೋಪಾಲ್ ವಹಿಸಿದ್ದು ಶ್ರೀಮತಿ ರೋಹಿಣಿ ವೆಂಕಟೇಶ ಭಟ್ ಬಹುಮಾನ ಹಂಚಿದರು. ಮೊಹಮದ್ ಸಾದಿಕ್ ಮುಖ್ಯ ಅತಿಥಿಗಳಾಗಿದ್ದರು.

ತಂಡಗಳಿಗೆ ಪ್ರಶಸ್ತಿಯ ಜೊತೆ ನಗದು ಬಹುಮಾನಗಳಲ್ಲದೆ, ಉತ್ತಮ ಆಟಗಾರರಿಗೆ ಪ್ರೇಕ್ಷಕರಿಂದಲೂ ಬಹುಮಾನಗಳು ದೊರೆತವು.

(ವರದಿ: ಹೆಚ್.ಎ.ಗೋಪಾಲ್)

---

## ಜಯಪ್ರಕಾಶ್, ನಾಗೇಶ್ ತಾ॥ ಯು॥ ಒಕ್ಕೂಟದ ಅಧ್ಯಕ್ಷ, ಕಾರ್ಯದರ್ಶಿ

ಕೊಪ್ಪ: ಕ್ಷೇತ್ರಾಭಿವೃದ್ಧಿ ಅಧಿಕಾರಿ ಕೆ. ಬಾಲಣ್ಣ ಗೌಡರ ಅಧ್ಯಕ್ಷತೆಯಲ್ಲಿ ಮಾ. ೧೦ರಂದು ನಡೆದ ಸಭೆಯಲ್ಲಿ ಕೊಪ್ಪ ತಾ॥ ಯುವಜನ ಒಕ್ಕೂಟದ ಅಧ್ಯಕ್ಷರಾಗಿ ಹೆಚ್.ಎಸ್.ಜಯಪ್ರಕಾಶ್, ಕಾರ್ಯದರ್ಶಿಯಾಗಿ ಬಲೆಗೋಡು ನಾಗೇಶ್ ಆಯ್ಕೆಯಾದರು. ೧೩ ಜನರ ನಿರ್ದೇಶಕ ಮಂಡಳಿಯನ್ನೂ ಆರಿಸಲಾಗಿದೆ.

---

## ಕೊಪ್ಪ ತಾ॥ ಭಾಜಪಾ ಸಮಿತಿ

ಕೊಪ್ಪ: ಮಾ. ೧೭ರಂದು ನಡೆದ ಭಾಜಪಾ ಸಭೆಯಲ್ಲಿ ಕೊಪ್ಪ ತಾ॥ ಸಮಿತಿಗೆ ಕೆಳಕಂಡವರು ಆಯ್ಕೆಯಾಗಿದ್ದಾರೆ: ಬಿ. ಎಂ. ರಘುನಾಥ ಶೆಟ್ಟಿ (ಅಧ್ಯಕ್ಷ), ಎ.ಪಿ. ವಿಜಯ ರಾಘವೇಂದ್ರ (ಉಪಾಧ್ಯಕ್ಷ), ಎಲ್. ಚಂದ್ರಶೇಖರ್ (ಪ್ರ.ಕಾರ್ಯದರ್ಶಿ), ಕೆ. ವಿ.ಶಿವಸ್ವಾಮಿ (ಖಜಾಂಚಿ). ೧೩ ಜನ ಸದಸ್ಯರು ಕಾರ್ಯಕಾರಿ ಸಮಿತಿಗೆ ಆಯ್ಕೆಯಾಗಿದ್ದು ಅದನ್ನು ವಿಸ್ತರಿಸಲಾಗುವುದು.

---

## ರಾಜ್ಯ ಮಟ್ಟದ ಪ್ರಶಸ್ತಿ

(ವರದಿ: ಕಲಬಿ ಶ್ರೀನಿವಾಸ್, ಅಗಳಗಂಡಿ)

ಅಗಳಗಂಡಿ: ತುಮಕೂರಿನಲ್ಲಿ ಇದೇ ತಿಂಗಳ ೧೨, ೧೩, ೧೪ರಂದು ನಡೆದ ರಾಜ್ಯ ಮಟ್ಟದ ಯುವಜನ ಮೇಳದಲ್ಲಿ ಮೈಸೂರು ವಿಭಾಗವನ್ನು ಪ್ರತಿನಿಧಿಸಿದ ಕೊಪ್ಪ ತಾಲ್ಲೂಕ್‌ನ ಹುಲಿಗರಡಿ ತರುಣರೈತ ಸಂಘದ ಸದಸ್ಯ ಬಲೆಗೋಡು ನಾಗೇಶ್ ಒಗಟು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನವನ್ನು ಗಳಿಸಿದ್ದಾರೆ. ಇವರು ರಾಜ್ಯ ಮಟ್ಟದಲ್ಲಿ ಈ ಪ್ರಶಸ್ತಿಯನ್ನು ಮೂರು ವರ್ಷಗಳಿಂದಲೂ ಉಳಿಸಿಕೊಂಡಿದ್ದಾರೆ.

## ಶೃಂಗೇರಿ ತಾ॥ ಭಾಜಪಾ ಸಮಿತಿ

ಶೃಂಗೇರಿ: ಮಾ. ೬ರಂದು ನಡೆದ ಪಕ್ಷದ ಸಭೆಯಲ್ಲಿ ತಾ॥ ಸಮಿತಿಗೆ ಈ ಕೆಳಕಂಡವರು ಆಯ್ಕೆಯಾಗಿದ್ದಾರೆ: ವಿ. ಸುಬ್ರಹ್ಮಣ್ಯ ಭಟ್ (ಅಧ್ಯಕ್ಷ), ಕೆ. ಪಿ. ಶ್ರೀನಿವಾಸ್ (ಉಪಾಧ್ಯಕ್ಷ), ಎಂ.ವಿ.ವೆಂಕಟಸುಬ್ಬಯ್ಯ ಶೆಟ್ಟಿ (ಕಾರ್ಯದರ್ಶಿ), ಎಸ್.ಸುಬ್ಬರಾವ್ (ಸಹಕಾರ್ಯದರ್ಶಿ), ಬಿ.ಕೆ.ಸುರೇಶ್ ಕಾಮತ್ (ಖಜಾಂಚಿ). ಜಿ.ಕೃಷ್ಣ ಮತ್ತು ಬೇಗಾನೆ ಮಂಜುನಾಥ್ ಸಮಿತಿಗೆ ಸದಸ್ಯರಾಗಿದ್ದು ಉಳಿದವರ ಆಯ್ಕೆ ಇಷ್ಟರಲ್ಲೇ ಆಗಲಿದೆ.

---

## ಜನತಾ ಪಕ್ಷದಿಂದ ಪಂಚಾಯ್ತಿ ಮಟ್ಟದಲ್ಲಿ ಸಮಿತಿಗಳ ರಚನೆ

ಕೊಪ್ಪ: ಕ್ಷೇತ್ರದ ಅಲ್ಲಲ್ಲಿ ಜನತಾ ಪಕ್ಷದ ಪಂಚಾಯ್ತಿ ಮಟ್ಟದ ಸಮಿತಿಗಳು ರಚನೆಯಾಗುತ್ತಿವೆ. ಆಯಾ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ತುರ್ತಾಗಿ ಆಗಬೇಕಾದ ಕೆಲಸ–ಕಾಮಗಾರಿಗಳನ್ನು ಸರ್ಕಾರದಿಂದ ಮಾಡಿಸಲು ಯತ್ನಿಸುವುದೂ, ಸ್ಥಳೀಯ ರೈತ ಸಮುದಾಯದ ದಿನವಹಿ ಕಚೇರಿ ಕೆಲಸಗಳಲ್ಲಿ ನೆರವಾಗುವುದೂ ಈ ಸಮಿತಿಗಳ ಪ್ರಮುಖ ಕೆಲಸವಾಗಿರುತ್ತದೆ.

### ಅಗಳಗಂಡಿ

ವೈ.ಎಂ.ವೆಂಕಟೇಶ್, ಎಡೂರು (ಅಧ್ಯಕ್ಷ), ಕೆ.ಎಸ್. ಭಾಸ್ಕರ್‌ರಾವ್, ಮೊಸರಮಾವು (ಉಪಾಧ್ಯಕ್ಷ), ಹಂಚನೂರು ರತ್ನಾಕರ್ (ಕಾರ್ಯದರ್ಶಿ), ಜಿ. ಎನ್. ವೆಂಕಟೇಶ್ (ಸಹಕಾರ್ಯದರ್ಶಿ) ಮತ್ತು ಹದಿನಾರು ಮಂದಿ ಸಮಿತಿಯ ಸದಸ್ಯರು.

ಈ ಇಪ್ಪತ್ತು ಮಂದಿಯ ಕಾರ್ಯಕಾರಿ ಮಂಡಳಿಯಿಂದ ಹೋಬಳಿ ಮಟ್ಟದ ಪಕ್ಷದ ಸಮಿತಿಗೆ ಎಂ.ಕೆ. ತಮ್ಮಣ್ಣ ಹೆಗ್ಡೆಯವರನ್ನು ಆಯ್ಕೆ ಮಾಡಲಾಯಿತು. ಈ ಸಭೆಯ ಸಂಚಾಲಕತ್ವವನ್ನು ವೈ. ಎಂ. ಸುರೇಂದ್ರ ವಹಿಸಿದ್ದರು.

### ಅಸಗೋಡು

ಹೆಚ್.ಹೆಚ್.ಚಂದ್ರಪ್ಪ (ಅಧ್ಯಕ್ಷ), ಕೆ.ಎಸ್.ನಾಗೇಶ್ (ಉಪಾಧ್ಯಕ್ಷ), ಎಸ್. ಎ. ಪುರುಷೋತ್ತಮ (ಕಾರ್ಯದರ್ಶಿ), ಬಿ.ಎಸ್.ಸದಾನಂದ (ಖಜಾಂಚಿ) ಮತ್ತು ೨೩ ಜನ ಸದಸ್ಯರು ಆಯ್ಕೆಯಾಗಿದ್ದಾರೆ.

---

# ಸಮಾರಂಭಗಳು – ವಾರ್ಷಿಕೋತ್ಸವಗಳು

### ಕೊಪ್ಪ ಪ್ರ. ದ. ಕಾಲೇಜು

ಸ್ಥಳೀಯ ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ಪ್ರಥಮ ವಾರ್ಷಿಕೋತ್ಸವ ಸಮಾರಂಭ ಮಾ. ೧೬ ಮತ್ತು ೧೭ರಂದು ನಡೆಯಿತು.

ಈ ಅಂಗವಾಗಿ ಮಾ. ೧೬ರಂದು ನಡೆದ ಕ್ರೀಡಾ ದಿನಾಚರಣೆ ಸಮಾರಂಭದ ಅಧ್ಯಕ್ಷತೆಯನ್ನು ಎ. ಮನೋಹರ ರಾವ್ ವಹಿಸಿದ್ದರು. ತಹಸೀಲ್ದಾರ್ ಹೆಚ್.ಎಂ.ನಾಗಪ್ಪ ಮುಖ್ಯ ಅತಿಥಿಗಳಾಗಿದ್ದರು. ತಾ॥ಅ॥ಮಂ॥ ಅಧ್ಯಕ್ಷ ಬಿ.ಜಿ.ಚಿದಂಬರ್ ಉಪಸ್ಥಿತರಿದ್ದರು. ಪ್ರಶಸ್ತಿ ವಿಜೇತರಿಗೆ ತಹಸೀಲ್ದಾರ್ ಬಹುಮಾನ ವಿತರಣೆ ಮಾಡಿದರು. ಪ್ರಭಾಕರ್ ಸ್ವಾಗತಿಸಿ, ರುದ್ರಯ್ಯ ವಂದಿಸಿದರು.

ಮಾ. ೧೭ರಂದು ನಡೆದ ಸಾಂಸ್ಕೃತಿಕ ದಿನಾಚರಣೆ ಸಮಾರಂಭದ ಅಧ್ಯಕ್ಷತೆಯನ್ನು ಎಂ. ಡಿ. ಬಾಲಕೃಷ್ಣ ವಹಿಸಿದ್ದರು. ಶೃಂಗೇರಿ ಕಾಲೇಜಿನ ಉಪನ್ಯಾಸಕರಾದ ಹೆಚ್. ಎಲ್. ಸುಬ್ರಹ್ಮಣ್ಯ ಭಾಗವಹಿಸಿ ವಿದ್ಯಾರ್ಥಿಗಳನ್ನು ಕುರಿತು ಮಾತನಾಡಿದರು. ತಾ॥ಅ॥ಮಂ॥ ಅಧ್ಯಕ್ಷ ಬಿ.ಜಿ.ಚಿದಂಬರ್ ಸಮಾರೋಪ ಭಾಷಣ ಮಾಡಿದರು. ಬಹುಮಾನ ವಿಜೇತರಿಗೆ ಎಂ.ಡಿ.ಬಾಲಕೃಷ್ಣ ಪ್ರಶಸ್ತಿ ವಿತರಣೆ ಮಾಡಿದರು. ವೆಂಕಟೇಶ್ ಸ್ವಾಗತಿಸಿದರು. ನಾಗೇಶ ಶರ್ಮ ವಂದಿಸಿದರು.

ಈ ಸಮಾರಂಭದ ಅಂಗವಾಗಿ, ಎರಡೂ ದಿನವೂ ವಿವಿಧ ಮನರಂಜನೆ, ನಾಟಕಗಳು ಮತ್ತು ಚಿತ್ರ ಕಲಾ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

### ಶಾಂತಿ ಗ್ರಾಮ

ಇಲ್ಲಿನ ದುರ್ಗಾಂಬ ಮಹಿಳಾ ಸಮಾಜ ಮತ್ತು ಸರ್ವೋದಯ ಯುವಕ ರೈತ ಸಂಘಗಳ ವಾರ್ಷಿಕೋತ್ಸವ ಮಾ. ೮ರಂದು ಕೆ. ರಾಮಪ್ಪ ಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ಹೆಚ್.ಎಸ್.ಕೃಷ್ಣಮೂರ್ತಿ, ಕೆ.ಟಿ. ಬೋರಯ್ಯ, ಜೆ.ಸಿ.ಸುಬ್ರಾವ್ ಮತ್ತು ಎ.ಪಿ.ಶ್ರೀಪಾಲ್ ಮುಖ್ಯ ಅತಿಥಿಗಳಾಗಿದ್ದರು. ಪಂ.ಅಧ್ಯಕ್ಷ ಅಬ್ದುಲ್ ರಹಮಾನ್ ಅದೃಷ್ಟ ಬಹುಮಾನದ ವಿತರಣೆ ಮಾಡಿದರು. ಸ್ವಾಗತ ಮತ್ತು ಯುವಕ ಸಂಘದ ವರದಿ: ಎಂ.ಎಸ್.ರಾಮಚಂದ್ರ, ಸಮಾಜದ ವರದಿ: ಕೆ.ಪಿ.ಗಾಯತ್ರಿ, ವಂದನಾರ್ಪಣೆ: ಕೆ. ಆರ್. ದೇವೇಂದ್ರ ಅವರಿಂದ ನಡೆದವು.

### ಹಾಲ್ಮುತ್ತೂರು

ಇಲ್ಲಿನ ಸ.ಹಿ.ಪ್ರಾ. ಶಾಲೆಯ ನೂತನ ರಂಗಮಂದಿರದ ಪ್ರಾರಂಭೋತ್ಸವ ಮತ್ತು ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ಮಾ. ೯ರಂದು ಕಮ್ಮರಡಿ ಸ॥ ಕಿರಿಯ ಕಾಲೇಜು ಪ್ರಾಂಶುಪಾಲ ಎ.ಆರ್.ಮಂಜುನಾಥ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಪಿ.ಜಿ.ಗುರ್ಜರ್ ಸಮಾರಂಭ ಉದ್ಘಾಟಿಸಿದರು. ಶಾಲಾ ತನಿಖಾಧಿಕಾರಿಗಳಾದ ಎ. ಆರ್.ಶ್ರೀನಿವಾಸ್ ಮತ್ತು ಬಿ.ಲಕ್ಷ್ಮೀನಾರಾಯಣ ಬಹುಮಾನ ವಿತರಣೆ ಮತ್ತು ಸಮಾರೋಪಭಾಷಣ ಮಾಡಿದರು. ಶಾಲಾ ಮಕ್ಕಳಿಂದ ನಾಟಕಗಳು, ಮನರಂಜನೆ ನಡೆದವು.

### ಅರೇಹಳ್ಳಿ

ಇಲ್ಲಿನ ಶಾಲಾ ವಾರ್ಷಿಕೋತ್ಸವ, ಶಾರದಾ ಕಲಾ ಸಂಘದ ವಾರ್ಷಿಕೋತ್ಸವ ಮತ್ತು ನೂತನ ರಂಗಮಂದಿರದ ಉದ್ಘಾಟನೆ ಕಾರ್ಯಕ್ರಮಗಳು ಮಾ.೯ರಂದು ಬಿ.ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ನಡೆದವು. ತಾ. ಅ.ಮಂಡಲಿಯ ಸ್ಥಳೀಯ ಸದಸ್ಯ ಎ. ರಾಮಚಂದ್ರ ರಾವ್ ರಂಗಮಂಟಪ ಉದ್ಘಾಟಿಸಿದರು. ಪಂ. ಅಧ್ಯಕ್ಷ ಹೆಚ್.ಟಿ.ರಾಮಪ್ಪ ಗೌಡ, ಬಾಳ್ತಾರು ಆನಂದರಾಮ ಭಟ್, ಜೆ.ಸಿ.ಸುಬ್ರಾವ್ ಮುಖ್ಯ ಅತಿಥಿಗಳಾಗಿದ್ದರು. ಬಲೆಗೋಡು ನಾಗೇಶ್‌ರಿಂದ ಸ್ವಾಗತ, ಎ.ಆರ್.ರಾಧಾಕೃಷ್ಣರಿಂದ ವರದಿ, ವಂದನಾರ್ಪಣೆ ನಡೆದವು. ಸಂಘದ ಸದಸ್ಯ–ಸದಸ್ಯೆಯರು ನಾಟಕಗಳನ್ನು ಅಭಿನಯಿಸಿದರು.

(ವರದಿ: ಎ.ಆರ್.ರಾಧಾಕೃಷ್ಣ)

### ಗುಡ್ಡೇತೋಟ

ಇಲ್ಲಿನ ಮೈತ್ರಿ ಶಿಶು ವಿಹಾರದ ವಾರ್ಷಿಕೋತ್ಸವ ಮಾ. ೧೩ರಂದು ಶ್ರೀಮತಿ ಜಲಜಾಕ್ಷಿ ರಘುಪತಿ ರಾವ್ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಜಿ.ವಿ.ನಾಗರತ್ನ ಸ್ವಾಗತಿಸಿದರು. ಸಮಾಜದ ಅಧ್ಯಕ್ಷೆ ವರದಿ ಓದಿದರು. ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಪತ್ರಿಕಾ ಪ್ರತಿನಿಧಿ ಎಂ.ಪಿ.ಗಂಗಾಧರ್ ಮುಖ್ಯ ಅತಿಥಿಗಳಾಗಿದ್ದರು. ಪಂ.ಅಧ್ಯಕ್ಷರು ಮಕ್ಕಳಿಗೆ ಬಹುಮಾನ ಹಂಚಿದರು. ಬಿ. ಎಸ್. ಭಾನುಮತಿ ವಂದಿಸಿದರು.

### ಕಿ.ಪ್ರಾ. ಶಾಲೆ, ಮೌಳಿ

ಶೃಂಗೇರಿ ತಾ॥ ಕುಂದೂರು ಗ್ರಾಮದ ಮೌಳಿಯ ಕಿ.ಪ್ರಾ.ಶಾಲೆಯಲ್ಲಿ ಮಾ. ೧೧ರಂದು ಶಾಲೆಯ ಹಾಗೂ ಶ್ರೀರಾಮ ಯುವಕ ಸಂಘದ ವಾರ್ಷಿಕೋತ್ಸವ ಸಮಾರಂಭ ನಡೆಯಿತು. ತಾ. ಅ. ಮಂ. ಅಧ್ಯಕ್ಷ ಡಿ. ಕಳಸಪ್ಪ ಹೆಗ್ಡೆ ಅಧ್ಯಕ್ಷತೆ ವಹಿಸಿದ್ದರು. ಪಂ.ಅಧ್ಯಕ್ಷ ಹೆಚ್.ಕೆ.ಶಿವಪ್ಪ ಗೌಡ ಮುಖ್ಯ ಅತಿಥಿಗಳಾಗಿದ್ದು ಸಹಾಯಕ ವಿದ್ಯಾಧಿಕಾರಿಗಳು ಬಹುಮಾನ ಹಂಚಿದರು. ಮೌಳಿ ಗಣೇಶಯ್ಯ ಸಮಾರೋಪ ಭಾಷಣ ಮಾಡಿದರು. ನಾಟಕ, ಮನ ರಂಜನೆ ಕಾರ್ಯಕ್ರಮಗಳು ನಡೆದವು.

(ವರದಿ: ಬಿ.ಎಂ.ವೆಂಕಟೇಶ್)

## ಗುದ್ದಲಿ ಪೂಜೆ

ಮಾ. ೩ರಂದು ಬೇಗಾರಿನ ವೈದೇಹಿ ಮಹಿಳಾ ಸಮಾಜದ ಹೊಸ ಕಟ್ಟಡಕ್ಕೆ ಗುದ್ದಲಿ ಪೂಜೆಯನ್ನು ಸಮಾಜದ ಅಧ್ಯಕ್ಷೆ ವಿಜಯಾ ಕಾಮತ್ ನೆರವೇರಿಸಿದರು. ಪಂ. ಅಧ್ಯಕ್ಷ ಕೆ.ಟಿ.ಸಂಜೀವ ಗೌಡ, ಸದಸ್ಯ ಡಾ॥ ಹಿರಿಯಣ್ಣ, ಸಮಾಜದ ಕಾರ್ಯದರ್ಶಿ ಕು। ಯಶೋದ ಮತ್ತಿತರರು ಹಾಜರಿದ್ದರು. ಈ ಕಟ್ಟಡಕ್ಕೆ ರಾ.ಗ್ರಾ.ಉ.ಯೋಜನೆಯಲ್ಲಿ ೩೦ ಸಾವಿರ ರೂ. ಮಂಜೂರಾಗಿದೆಯೆಂದು ತಿಳಿದುಬಂದಿದೆ.

(ವರದಿ: ಎಸ್.ಕೆ.ಶೃಂಗೇಶ್ವರ)

---

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು : ದೀಪಟಿಗೆ ಅಚ್ಚುಕೂಟ, ಕೊಪ್ಪ